ಉದಯವಾಣಿ

ಮಂಗಳವಾರ 29 ಡಿಸೆಂಬರ್ 2009



ಇತ್ತೀಚೆಗೆ ಗಾಂಧೀ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ. ಎಚ್.ಆರ್. ದಾಸೇಗೌಡರಿಗೆ 'ವೂಡೇ ಪ್ರತಿಷ್ಠಾನ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಸಿದ್ಧಾರ್ಥ ಶರ್ಮ, ನಿಧಿಯ ಅಧ್ಯಕ್ಷ ಡಾ. ಹೋ. ಶ್ರೀನಿವಾಸಯ್ಯ, ಡಬ್ಲ್ಯು.ಎಚ್. ಹನುಮಂತಪ್ಪ ದತ್ತಿ ಪ್ರತಿನಿಧಿ ಡಬ್ಲ್ಯು.ಎಚ್. ದೇವಕುಮಾರ್, ಸಹ ಕಾರ್ಯದರ್ಶಿ ಡಿ.ಕೆ. ಕೋದಂಡರಾಮ, ತುಮಕೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ. ಓ. ಅನಂತರಾಮಯ್ಯ ಮತ್ತು ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಸಂಜೆವಾಣಿ
ಸೋಮವಾರ 28 ಡಿಸೆಂಬರ್ 2009

# ಮಧುಮೇಹ ಜಾಗೃತಿ ಶಿಬಿರ

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಡಿ. ೨೮- ಸ್ವಾಮಿ ವಿವೇಕಾನಂದ ಯೋಗ ಅನುಸಂಧಾನ ಸಂಸ್ಥಾನ, ಮಧುಮೇಹ ನಿಯಂತ್ರಣ ಕುರಿತಂತೆ ಬೃಹತ್ ಜಾಗೃತಿ ಶಿಬಿರವನ್ನು ಜ. 3ರಂದು ಹಮ್ಮಿಕೊಂಡಿದೆ ಎಂದು ಸ್ವಾಮಿ ವಿವೇಕಾನಂದ ಯೋಗ ವಿಶ್ವವಿದ್ಯಾಲಯದ ಮುಖ್ಯಸ್ಥೆ ಡಾ. ಆರ್. ನಾಗರತ್ನ ಇಂದಿಲ್ಲಿ ತಿಳಿಸಿದರು.

ಅಂದು ಬೆಳಗ್ಗೆ 9.30ಕ್ಕೆ ಯಲಹಂಕ ಉಪನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಶಿಬಿರದ ಉದ್ಘಾಟನೆ ನಡೆಯಲಿದ್ದು, ವಿಎಸ್‌ಎಲ್ ಗ್ರೂಪ್‌ನ ವ್ಯವಸ್ಥಾಪಕ ನಿರ್ದೇಶಕ ಎಂ. ಪೂಬಾಲನ್, ಶಾಸಕ ಎಸ್.ಆರ್. ವಿಶ್ವನಾಥ್, ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್‌ನ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಟಿ. ಕೃಷ್ಣ, ಖ್ಯಾತ ಮಧುಮೇಹ ತಜ್ಞ ಡಾ.ಸಿ. ಮುನಿಚೂಡಪ್ಪ, ಯೋಗ ವಿಶ್ವವಿದ್ಯಾಲಯದ ಉಪಕುಲಪತಿ ಡಾ. ಎಸ್.ಆರ್. ನಾಗೇಂದ್ರ, ಭಾಗವಹಿಸಲಿದ್ದಾರೆ ಎಂದು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ಮಧುಮೇಹ ತೀವ್ರಗತಿಯಲ್ಲಿ ಹೆಚ್ಚಾಗುತ್ತಿದ್ದು, ಇದಕ್ಕೆ ಪರಿಹಾರ ಕಂಡು ಹಿಡಿಯಬೇಕಾಗಿದೆ. ಈ ನಿಟ್ಟಿನಲ್ಲಿ ಜನರಲ್ಲಿ ಜಾಗೃತಿ ಮೂಡಿಸಲು ಶಿಬಿರದ ಉದ್ಘಾಟನೆ ಹಮ್ಮಿಕೊಳ್ಳಲಾಗಿದೆ ಎಂದು ಹೇಳಿದರು.ಭಾರತದಲ್ಲಿ ಸರಿ ಸುಮಾರು 5 ಕೋಟಿ ಜನರಿಗೆ ಮಧುಮೇಹವಿದ್ದು, ಅಲ್ಪಕಾಲದಲ್ಲಿಯೇ ಭಾರತ ಮಧುಮೇಹಿಗಳ ರಾಜಧಾನಿಯಾದರೂ ಅಚ್ಚರಿಯಿಲ್ಲ ಎಂದು ಹೇಳಿದ ಅವರು ಈ ನಿಟ್ಟಿನಲ್ಲಿ ಜನರಲ್ಲಿ ಜಾಗೃತಿ ಮೂಡಿಸಲು ಸ್ವಾಮಿ ವಿವೇಕಾನಂದ ಯೋಗ ಅನುಸಂಧಾನ ಸಂಸ್ಥಾನ 9 ವಲಯಗಳಲ್ಲಿ 108 ಯೋಗ ಚಿಕಿತ್ಸಾ ಕೇಂದ್ರಗಳನ್ನು ತೆರೆಯಲಾಗಿದೆ ಎಂದರು.ಈ ಕೇಂದ್ರಗಳಲ್ಲಿ ಮಧುಮೇಹಿಗಳು ಪ್ರತಿದಿನ 1 ಗಂಟೆಗಳ ಕಾಲ ಚಿಕಿತ್ಸೆ ಪಡೆಯಬಹುದಾಗಿದೆ ಎಂದ ಅವರು ಜ. 3ರಂದು ನಡೆಯುವ ಕಾರ್ಯಕ್ರಮದಲ್ಲಿ ಸುಮಾರು 1 ಸಾವಿರ ಮಂದಿ ಭಾಗವಹಿಸುವ ನಿರೀಕ್ಷೆಯಿದೆ ಎಂದರು.

ಪತ್ರಿಕಾಗೋಷ್ಠಿಯಲ್ಲಿ ಯೋಗ. ವಿಶ್ವವಿದ್ಯಾಲಯದ ದೇವರಾಜ್, ಶ್ರೀಕಾಂತ್, ಗಣೇಶ್ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ

ಭಾನುವಾರ 27 ಡಿಸೆಂಬರ್ 2009



ನಗರದ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ. ಹೆಚ್. ಆರ್. ದಾಸೇಗೌಡ ಅವರಿಗೆ ವೂಡೆ ಪ್ರತಿಷ್ಠಾನ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಸ್ಮಾರಕ ನಿಧಿಯ ಅಧ್ಯಕ್ಷ ಡಾ. ಹೋ. ಶ್ರೀನಿವಾಸಯ್ಯ, ಡಬ್ಲ್ಯೂ. ಹೆಚ್. ಹನುಮಂತಪ್ಪ, ಡಬ್ಲ್ಯೂ. ಹೆಚ್. ದೇವಕುಮಾರ್, ಡಿ.ಕೆ. ಕೋದಂಡರಾಮ ವಿಶ್ರಾಂತ ಉಪಕುಲಪತಿ ಡಾ. ಜಿ. ಅನಂತರಾಮಯ್ಯ ಹಾಗೂ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೆ. ಪಿ. ಕೃಷ್ಣ ಅವರು ಇದ್ದಾರೆ.

ಪ್ರಜಾವಾಣಿ — ಶುಕ್ರವಾರ 25ನೇ ಡಿಸೆಂಬರ್ 2009




ಬೆಂಗಳೂರಿನ ಗಾಂಧಿ ಭವನದಲ್ಲಿ ಗುರುವಾರ ನಡೆದ ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ. ಎಚ್.ಆರ್.ದಾಸೇಗೌಡರಿಗೆ ವೂಡೇ ಪ್ರತಿಷ್ಠಾನ ಪ್ರಶಸ್ತಿ ಪ್ರದಾನ ಮಾಡಲಾಯಿತು. ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಸಿದ್ಧಾರ್ಥ ಶರ್ಮ, ನಿಧಿಯ ಅಧ್ಯಕ್ಷ ಡಾ. ಹೊ.ಶ್ರೀನಿವಾಸಯ್ಯ, ಡಬ್ಲ್ಯು.ಎಚ್.ಹನುಮಂತಪ್ಪ ದತ್ತಿ ಪ್ರತಿನಿಧಿ ಡಬ್ಲ್ಯು.ಎಚ್.ದೇವಕುಮಾರ್, ನಿಧಿಯ ಸಹ ಕಾರ್ಯದರ್ಶಿ ಡಿ.ಕೆ.ಕೋದಂಡರಾಮ, ತುಮಕೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ. ಓ.ಅನಂತರಾಮಯ್ಯ ಮತ್ತು ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ಚಿತ್ರದಲ್ಲಿದ್ದಾರೆ. —ಪ್ರಜಾವಾಣಿ ಚಿತ್ರ

# ಕನ್ನಡ ಆತ್ಮದ ಭಾಷೆ



ನಗರದ ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ಏರ್ಪಡಿಸಿದ್ದ ಕರ್ನಾಟಕ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಕಾಲೇಜಿನ ಪ್ರಾಂಶುಪಾಲ ಪ್ರೊ.ಎನ್. ಬೈರೇಗೌಡ, ವಕ್ಫ್ ಮಂಡಳಿ ಸದಸ್ಯ ಡಾ. ಐಜಾಸುದ್ದಿನ್, ವೂಡೆ ಪಿ. ಕೃಷ್ಣ ಎಸ್. ವೀರಭದ್ರಯ್ಯ, ಎಸ್.ಆರ್. ಪಂಡಿತಾರಾಧ್ಯ ಮತ್ತಿತರರಿದ್ದರು.

ಬೆಂಗಳೂರು,ನ.24-ಕನ್ನಡ ಸಾಹಿತ್ಯಕ್ಕೆ ಪಂಪನಿಂದ ಇದುವರೆಗೂ ಒಂದು ಸಾವಿರ ವರ್ಷಗಳಿಗೂ ಹೆಚ್ಚಿನ ಇತಿಹಾಸವಿದೆ. ವಚನ ಸಾಹಿತ್ಯವು ಪ್ರಾಪಂಚಿಕ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯದ ಅತ್ಯುತ್ತಮ ಕೊಡುಗೆ ಎಂದು ವಕ್ಫ್ ಮಂಡಳಿಯ ಸದಸ್ಯ ಡಾ. ಐಜಾಸುದ್ದಿನ್ ಶ್ಲಾಘಿಸಿದರು.

ನಗರದ ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ಏರ್ಪಡಿಸಿದ್ದ ಕರ್ನಾಟಕ ರಾಜ್ಯೋತ್ಸವ ಸಮಾರಂಭದಲ್ಲಿ ಅವರು ಭಾಗವಹಿಸಿ ಮಾತನಾಡಿ ಕನ್ನಡವೆಂಬುದು ಆತ್ಮದ ಭಾಷೆ ನಾನು ಹಿಂದಿಯಲ್ಲಿ ಪಿಎಚ್‌ಡಿ ಮಾಡಿದ್ದರೂ ಅದನ್ನು ಬರೆದಿದ್ದು ಕನ್ನಡದಲ್ಲಿ ಎಂದರು. ಡಾ. ವೂಡೆ ಪಿ. ಕೃಷ್ಣ ಮಾತನಾಡಿ, ಕನ್ನಡ ಒಂದು ಅಮೋಘ ಭಾಷೆ ಕುವೆಂಪು ಅವರು ನುಡಿದಂತೆ ಎಲ್ಲಾದರೂ ಇರು ಎಂತಾದರೂ ಇರು ಎಂದೆಂದೂ ನೀ ಕನ್ನಡವಾಗಿರು ಎಂದು ವಿದ್ಯಾರ್ಥಿಗಳಿಗೆ ಹಿತವಚನ ಹೇಳಿದರು.

ಕಾರ್ಯಕ್ರಮದಲ್ಲಿ ಕಾಲೇಜಿನ ಆಡಳಿತ ಸಲಹಾ ಪರಿಷತ್‌ನ ಅಧ್ಯಕ್ಷ ಎಸ್.ವೀರಭದ್ರಯ್ಯ, ಎಸ್.ಆರ್. ಪಂಡಿತಾರಾಧ್ಯ, ಡಾ. ಲಕ್ಷ್ಮೀದೇವಿ, ಬಿ.ಎಸ್. ಮಧು ಮತ್ತಿತರರಿದ್ದರು.




## ಉದ್ಘಾಟನೆ

ಐಸಾಕ್ ನ್ಯೂಟನ್ ಶಾಲೆಯಲ್ಲಿ ಜೂನಿಯರ್ ರೆಡ್‌ಕ್ರಾಸ್ ಘಟಕ ಉದ್ಘಾಟನಾ ಸಮಾರಂಭದಲ್ಲಿ ಡಾ।ಪೂಡೇ ಪಿ.ಕೃಷ್ಣ, ರಾಜು ಚಂದ್ರಶೇಖರ್, ಡಾ।ಎನ್.ಜಿ.ನಾರಾಯಣ, ಸಿ.ಎನ್.ಎನ್.ರಾಜು, ಪಿ.ಪಳನಿ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಮಂಗಳವಾರ, 8 ಡಿಸೆಂಬರ್ 2009



## ಚೆಕ್ ಹಸ್ತಾಂತರ

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಉತ್ತರ ಕರ್ನಾಟಕ ನೆರೆ ಸಂತ್ರಸ್ತರ ಪರಿಹಾರ ನಿಧಿಗೆ 50 ಲಕ್ಷ ರು. ಚೆಕ್ಕನ್ನು ಮುಖ್ಯಮಂತ್ರಿ ಯಡಿಯೂರಪ್ಪರಿಗೆ ಹಸ್ತಾಂತರಿಸಿತು. ಪ್ರೊ। ದೊರೆಸ್ವಾಮಿ, ಡಾ।ವೂಡೇ ಪಿ.ಕೃಷ್ಣ, ಹೆಂಜಾರಪ್ಪ, ಅನಿಲ್‌ಕುಮಾರ್ ಇದ್ದರು.

ಕನ್ನಡಪ್ರಭ

ಶನಿವಾರ 5 ಡಿಸೆಂಬರ್ 2009

■ **ಬಿ.ಎಸ್.ನೀಲಕಂಠನ್:** ನನ್ನ ಸಾಮಾಜಿಕ ಹೊಣೆಗಾರಿಕೆಗಳು, ಗಾಂಧೀ ಶಾಂತಿ ಪ್ರತಿಷ್ಠಾನ ನಿಧಿ, ಉಪಸ್ಥಿತಿ–ಡಾ।ಹೋ.ಶ್ರೀನಿವಾಸಯ್ಯ, ಡಾ।ವೊಡೇ ಪಿ.ಕೃಷ್ಣ, ಗಾಂಧೀಭವನ, ಕುಮಾರ ಪಾರ್ಕ್ ರಸ್ತೆ, ಮಧ್ಯಾಹ್ನ 3.

DECCAN HERALD

Saturday, December 5, 2009

**Gandhi Peace Foundation and Karnataka Gandhi Smaraka Nidhi:** Inter-school elocution contest and interactive session with students, Gandhi Bhavan, Kumara Park East, 3 pm.



ವಿಶ್ವ ಅಂಗವಿಕಲರ ದಿನದ ಅಂಗವಾಗಿ ಬೆಂಗಳೂರಿನ ಕಬ್ಬನ್ ಉದ್ಯಾನದ ಬಾಲಭವನದ ಆವರಣದಲ್ಲಿ ಗುರುವಾರ ಏರ್ಪಡಿಸಲಾಗಿದ್ದ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಮಕ್ಕಳು ಆಗಮಿಸುತ್ತಿರುವ ದೃಶ್ಯ. -ಪ್ರಜಾವಾಣಿ ಚಿತ್ರ

*ವಿಶ್ವ ಅಂಗವಿಕಲರ ದಿನದಲ್ಲಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಪ್ರಕಟ*

# ಅಂಗವಿಕಲರ ಅಭಿವೃದ್ಧಿ ನಿಗಮ ಸ್ಥಾಪನೆ

**ಪ್ರಜಾವಾಣಿ ವಾರ್ತೆ**

**ಬೆಂಗಳೂರು:** 'ಅಂಗವಿಕಲರ ಕಲ್ಯಾಣಕ್ಕಾಗಿ ಮುಂದಿನ ವರ್ಷ ಅಂಗವಿಕಲರ ಅಭಿವೃದ್ಧಿ ನಿಗಮ ಸ್ಥಾಪಿಸಲಾಗುವುದು' ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ತಿಳಿಸಿದರು.

ವಿಶ್ವ ಅಂಗವಿಕಲರ ದಿನದ ಅಂಗವಾಗಿ ಕಬ್ಬನ್ ಉದ್ಯಾನದ ಬಾಲಭವನದ ಆವರಣದಲ್ಲಿ ಗುರುವಾರ ನಡೆದ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

'ಅಂಗವಿಕಲರ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಹೆಚ್ಚಿನ ಆದ್ಯತೆ ನೀಡುತ್ತಿದ್ದು, ನಿಗಮದ ಸ್ಥಾಪನೆಗೆ ಮುಂದಿನ ಬಜೆಟ್‌ನಲ್ಲಿ ಹಣ ಮೀಸಲಿಡಲಾಗುವುದು. ನಿಗಮದ ಮೂಲಕ ಅಂಗವಿಕಲರ ಸಮಸ್ಯೆಗಳನ್ನು ಹಂತಹಂತವಾಗಿ ಪರಿಹರಿಸಲಾಗುವುದು' ಎಂದು ಅವರು ಭರವಸೆ ನೀಡಿದರು.

'ಅಂಗವಿಕಲರ ಕ್ಷೇಮಾಭಿವೃದ್ಧಿ ಭವನ ನಿರ್ಮಿಸುವ ಬಗ್ಗೆಯೂ ಸರ್ಕಾರ ಚಿಂತನೆ ನಡೆಸಿದ್ದು, ಕಟ್ಟಡ ನಿರ್ಮಾಣಕ್ಕೆ ಬೃಹತ್ ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ನಿವೇಶನ ನೀಡಲಾಗುವುದು. ಭವನ ನಿರ್ಮಾಣಕ್ಕೆ ಅಗತ್ಯ ಕ್ರಮ ತೆಗೆದುಕೊಳ್ಳಲಾಗುವುದು' ಎಂದು ಅವರು ತಿಳಿಸಿದರು.

'ರಾಜ್ಯದಲ್ಲಿ ಸುಮಾರು 9.6 ಲಕ್ಷ ಮಂದಿ ಅಂಗವಿಕಲರಿದ್ದು, ಈಗಾಗಲೇ 4 ಲಕ್ಷ ಮಂದಿಗೆ ಉಚಿತ ಬಸ್ ಪಾಸ್ ನೀಡಲಾಗಿದೆ. 5.5 ಲಕ್ಷ ಮಂದಿಗೆ ರಿಯಾಯಿತಿ ದರದ ಪಾಸ್ ನೀಡಲಾಗಿದೆ. ಇದಕ್ಕೆಂದೇ ಸರ್ಕಾರದ ವತಿಯಿಂದ ಪ್ರತಿ ವರ್ಷ 7.5 ಕೋಟಿ ರೂಪಾಯಿ ವೆಚ್ಚ ಮಾಡಲಾಗುತ್ತಿದೆ. ಮುಂದಿನ ದಿನಗಳಲ್ಲಿ ಇನ್ನಷ್ಟು ಮಂದಿಗೆ ಪಾಸ್ ಸೌಲಭ್ಯ ಕಲ್ಪಿಸಲಾಗುವುದು' ಎಂದು ಅವರು ಮಾಹಿತಿ ನೀಡಿದರು.

'ಉದ್ಯೋಗಾವಕಾಶದಲ್ಲಿ ಅಂಗವಿಕಲರಿಗೆ ಮೀಸಲಾತಿ ಸೌಲಭ್ಯವಿದ್ದು, 'ಎ, ಬಿ, ಸಿ ಮತ್ತು ಡಿ' ವಿಭಾಗದ ಹುದ್ದೆಗಳನ್ನು ಹಂತಹಂತವಾಗಿ ಭರ್ತಿ ಮಾಡಲಾಗುವುದು. ನಿಯಮಗಳನ್ನು ಪಾಲಿಸಲಾಗುವುದು. ಜೊತೆಗೆ ಬ್ಯಾಕ್‌ಲಾಗ್ ಹುದ್ದೆಗಳನ್ನೂ ಸಹ ಭರ್ತಿ ಮಾಡಲಾಗುವುದು' ಎಂದು ಯಡಿಯೂರಪ್ಪ ತಿಳಿಸಿದರು.

'ಅಂಗವಿಕಲರ ಉತ್ತಮ ಜೀವನ ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವ ವಿಶೇಷ ಶಾಲೆಗಳಿಗೆ ಅನುದಾನ ನೀಡಲಾಗುತ್ತಿದೆ. ಸದ್ಯಕ್ಕೆ 25 ವಿಶೇಷ ಶಾಲೆಗಳಿಗೆ ಅನುದಾನ ನೀಡಲಾಗುತ್ತಿದ್ದು, ಮುಂದಿನ ದಿನಗಳಲ್ಲಿ ರಾಜ್ಯದ ಇತರ ಶಾಲೆಗಳಿಗೂ ವಿಸ್ತರಿಸಲಾಗುವುದು' ಎಂದು ಅವರು ಹೇಳಿದರು.

'ಅಂಗವಿಕಲರ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಮತ್ತು ಉತ್ತಮ ಜೀವನ ಕಟ್ಟಿಕೊಡುವಲ್ಲಿ ಖಾಸಗಿ ಸಂಘಸಂಸ್ಥೆಗಳು ಸಹ ತಮ್ಮದೇ ಆದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿರುವುದು ಶ್ಲಾಘನೀಯ. ಅಂಗವಿಕಲರ ಎಲ್ಲ ರೀತಿಯ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಬದ್ಧವಿದೆ' ಎಂದು ಅವರು ತಿಳಿಸಿದರು.

ಅಂಗವಿಕಲರ ಕ್ಷೇತ್ರದಲ್ಲಿ ಸಾಧನೆ ಮಾಡಿದ ವ್ಯಕ್ತಿಗಳಿಗೆ, ವಿಶೇಷ ಶಿಕ್ಷಕರಿಗೆ ಮತ್ತು ಸಂಸ್ಥೆಗಳಿಗೆ 2008 ಮತ್ತು 2009ನೇ ಸಾಲಿನ ಪ್ರಶಸ್ತಿಯನ್ನು ಇದೇ ಸಂದರ್ಭದಲ್ಲಿ ಪ್ರದಾನ ಮಾಡಲಾಯಿತು.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವ ಸಿ.ಎಂ.ನರೇಂದ್ರಸ್ವಾಮಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಕಾರ್ಯದರ್ಶಿ ಡಾ. ಡಿ.ಎಸ್.ಅಶ್ವತ್ಥ್, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ನಿರ್ದೇಶಕ ಜಿ.ಜಯರಾಂ ಮತ್ತಿತರರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

### ಪ್ರಶಸ್ತಿ ಪಡೆದವರ ವಿವರ

**2008ರ ಸಾಲಿನ ಪ್ರಶಸ್ತಿ ಪುರಸ್ಕೃತರು**

**ವೈಯಕ್ತಿಕ ಪ್ರಶಸ್ತಿ:** ಬೆಂಗಳೂರಿನ ಪ್ರಹ್ಲಾದ ದೇಸಾಯಿ, ಪ್ರೊ.ಎ.ಕೃಷ್ಣ, ಜಿ.ಎಚ್.ತುಳಸೀಧರ, ಎಚ್.ಪಿ.ಉಮಾ, ಜಿ.ಮಂಜುನಾಥ್, ಪಿ.ಸೋಮಶೇಖರ್, ಹಾವೇರಿ ಇಮ್ತಿಯಾಜ್ ಅಹಮದ್ ಕಚವಿ ಮತ್ತು ಬೆಳಗಾವಿಯ ಲಕ್ಷ್ಮಣ ಸಾತಪ್ಪ ಮಗದಮ್ಮ.

**ವಿಶೇಷ ಶಿಕ್ಷಕರ ಪ್ರಶಸ್ತಿ:** ತುಮಕೂರಿನ ಸಿ.ಹೇಮಲತಾ, ಕೊಪ್ಪಳದ ವಿಜಯಲಕ್ಷ್ಮಿ ಯಲ್ಲಪ್ಪ ಕಲಾಲ್, ಚಿಕ್ಕಬಳ್ಳಾಪುರದ ರಮೇಶ್, ಮಂಗಳೂರಿನ ಕಸ್ತೂರಿ ಮತ್ತು ಪಿ.ಅಶೋಕ್‌ಕುಮಾರ್.

**ಪ್ರಶಸ್ತಿ ವಿಜೇತ ಸಂಸ್ಥೆ:** ಬೆಂಗಳೂರಿನ ಜೆಎಸ್‌ಎಸ್ ಸಹನಾ ಸಮನ್ವಯ ಶಿಕ್ಷಣ ಶಾಲೆ.

**2009ರ ಸಾಲಿನ ಪ್ರಶಸ್ತಿ ಪುರಸ್ಕೃತರು**

**ವೈಯಕ್ತಿಕ ಪ್ರಶಸ್ತಿ:** ಬೆಂಗಳೂರಿನ ಮಹಾಂತೇಶ್ ಜಿ. ಕಿವುಡ ಸಣ್ಣವರ್, ಉಮೇಶ್ ಎಸ್.ಕುಲಕರ್ಣಿ, ಆರ್.ಗುರುರಾವ್, ಉಡುಪಿಯ ವಿಲಿಯಮ್ ಡೇಸಾ, ವಿಲ್ಫ್ರೆಡ್ ವಿ.ಗೋಮ್ಸ್, ತುಮಕೂರಿನ ಜಿ.ಲೋಕೇಶ್, ಜಮಖಂಡಿಯ ಪ್ರಕಾಶ್ ಹಣಮಂತ ಹರಿಜನ ಮತ್ತು ಬೀದರ್‌ನ ಧಣಕ ಸಂತೋಷ್.

**ವಿಶೇಷ ಶಿಕ್ಷಕರ ಪ್ರಶಸ್ತಿ:** ಬೆಂಗಳೂರಿನ ಬಸವರಾಜು, ಉಷಾ ಜೋಸೆಫ್ ಕುಮಾರ್, ಜಿ.ಇಂದಿರಾ, ಬಳ್ಳಾರಿಯ ಗುರುಮೂರ್ತಿ ಮತ್ತು ಕೊಡಗಿನ ಸಿಸ್ಟರ್ ಎಲಿಕುಟ್ಟಿ.

**ಪ್ರಶಸ್ತಿ ವಿಜೇತ ಸಂಸ್ಥೆಗಳು:** ಕೋಲಾರದ ರಮಣ ಮಹರ್ಷಿ ಅಂಗವಿಕಲರ ಸಂಸ್ಥೆ, ಗುಲ್ಬರ್ಗದ ನ್ಯಾಷನಲ್ ಬಂಜಾರ ಶಿಕ್ಷಣ ಸಂಸ್ಥೆ, ಕೊಡಗಿನ ಸ್ವಸ್ಥ ವಿಶೇಷ ಶಿಕ್ಷಣ ಮತ್ತು ಪುನರ್ವಸತಿ ಕೇಂದ್ರ ಮತ್ತು ಬೆಂಗಳೂರಿನ ಮಾತೃ ಅಂಧರ ಶಿಕ್ಷಣ ಸಂಸ್ಥೆ.

ಹೊಸ ದಿಗಂತ

ಬುಧವಾರ 02, ಡಿಸೆಂಬರ್ 2009

# ಅಂಗವಿಕಲರ ಪ್ರಶಸ್ತಿ ಪ್ರಕಟ: ನಾಳೆ ಪುರಸ್ಕಾರ ವಿತರಣೆ

ಬೆಂಗಳೂರು: ಅಂಗವಿಕಲರ ಕ್ಷೇತ್ರದಲ್ಲಿ ಸಾಧನೆ ಮಾಡಿರುವ ಸಂಸ್ಥೆ, ವೈಯಕ್ತಿಕ ಹಾಗೂ ಶಿಕ್ಷಕ ವಿಭಾಗದಲ್ಲಿನ 2008 ಹಾಗೂ 2009ನೇ ಸಾಲಿನ ಪ್ರಶಸ್ತಿ ಪ್ರಕಟಿಸಲಾಗಿದೆ.

ಸಂಸ್ಥೆಗೆ ನೀಡಲಾಗುವ ಪ್ರಶಸ್ತಿ ಮೊತ್ತ ತಲಾ 25 ಸಾವಿರ ರೂ. ಹಾಗೂ ವೈಯಕ್ತಿಕ ವಿಭಾಗದಲ್ಲಿ ತಲಾ 10 ಸಾವಿರ ರೂ. ಪ್ರಶಸ್ತಿ ಮೊತ್ತವಾಗಿ ನೀಡಲಾಗುತ್ತದೆ. ಈ ಪ್ರಶಸ್ತಿಗಳನ್ನು ಗುರುವಾರ(ಡಿ.3)ದಂದು ಬೆಂಗಳೂರಿನ ಬಾಲಭವನದಲ್ಲಿ ಹಮ್ಮಿಕೊಂಡಿರುವ ವಿಶ್ವ ಅಂಗವಿಕಲರ ದಿನಾಚರಣೆ ಸಮಾರಂಭದಲ್ಲಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಪ್ರದಾನ ಮಾಡಲಿದ್ದಾರೆ

**ಸರಳ ಆಚರಣೆ**

ಉತ್ತರ ಕರ್ನಾಟಕದಲ್ಲಿ ನೆರೆ ಹಾನಿ ಹಿನ್ನೆಲೆಯಲ್ಲಿ ಪ್ರಶಸ್ತಿ ವಿತರಣಾ ಸಮಾರಂಭವನ್ನು ಸರಳವಾಗಿ ಆಚರಿಸಲಾಗುತ್ತಿದೆ. ಹಿಂದಿನ ವರ್ಷದ ಪ್ರಶಸ್ತಿ ಕಾರ್ಯಕ್ರಮ ಸಹ ಅಂದು ಮಾಜಿ ಪ್ರಧಾನಿ ವಿ.ಪಿ.ಸಿಂಗ್ ನಿಧನದಿಂದ ರದ್ದಾಗಿತ್ತು. ಹೀಗಾಗಿ 2008ನೇ ಸಾಲಿನ ಪ್ರಶಸ್ತಿಯನ್ನು ಈ ಬಾರಿಯ ಪ್ರಶಸ್ತಿ ವೇಳೆ ವಿತರಿಸಲಾಗುವುದು ಎಂದು ಮಹಿಳಾ ಹಾಗೂ ಮಕ್ಕಳ ಕಲ್ಯಾಣ ಸಚಿವ ನರೇಂದ್ರಸ್ವಾಮಿ ಮಂಗಳವಾರ ಸುದ್ದಿಗೋಷ್ಠಿಯಲ್ಲಿ ಪ್ರಶಸ್ತಿ ಪಟ್ಟಿ ಬಿಡುಗಡೆ ಮಾಡಿ ತಿಳಿಸಿದರು.

**2009ನೇ ಸಾಲಿನ ಪ್ರಶಸ್ತಿ ವಿವರ**

**ಸಂಸ್ಥೆ ವಿಭಾಗ:** ಮಾತೃ ಅಂಧರ ಶಿಕ್ಷಣ ಸಂಸ್ಥೆ-ಯಲಹಂಕ ಉಪನಗರ, ಬೆಂಗಳೂರು; ರಮಣಮಹರ್ಷಿ ಟ್ರಸ್ಟ್ ಫಾರ್ ಡಿಸೇಬಲ್ಡ್ ಪರ್ಸನ್ - ಕೆಜಿಎಫ್, ಬಂಗಾರಪೇಟೆ, ಕೋಲಾರ ಜಿಲ್ಲೆ; ನ್ಯಾಷನಲ್ ಬಂಜಾರ ಶಿಕ್ಷಣ ಸಂಸ್ಥೆ-ಶಿವನಗರ, ಗುಲ್ಬರ್ಗಾ; ಸ್ವಸ್ಥ ವಿಶೇಷ ಶಿಕ್ಷಣ ಮತ್ತು ಪುನರ್ವಸತಿ ಕೇಂದ್ರ-ಸುಂಟಿಕೊಪ್ಪ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ.

**ವೈಯಕ್ತಿಕ ವಿಭಾಗ**

ಮಹಂತೇಶ್ ಜಿ.ಕಿವುಡ ಸಣ್ಣವರ್, ಬೆಂಗಳೂರು; ಉಮೇಶ್ ಎಸ್.ಕುಲಕರ್ಣಿ, ಬೆಂಗಳೂರು; ವಿಲಿಯಂ ಡೇಸಾ, ಉಡುಪಿ ಜಿಲ್ಲೆ; ವಿಲ್ಫ್ರೆಡ್ ವಿ.ಗೋಮ್ಸ್, ಉಡುಪಿ ಜಿಲ್ಲೆ; ಆರ್.ಗುರುರಾಜ್, ಬೆಂಗಳೂರು; ಜಿ.ಲೋಕೇಶ್, ತುಮಕೂರು; ಪ್ರಕಾಶ ಹಣಮಂತ ಹರಿಜನ(ಕಾಂಬಳೆ); ಢಣಕೆ ಸಂತೋಷ್, ಬೀದರ್ ಜಿಲ್ಲೆ.

**ಶಿಕ್ಷಕರ ವಿಭಾಗ**

ಅಂಧ ಮಕ್ಕಳ ಶಿಕ್ಷಣ-ಬಸವರಾಜು, ಬೆಂಗಳೂರು; ಶ್ರವಣದೋಷವುಳ್ಳ ಮಕ್ಕಳ ಶಿಕ್ಷಣ-ಸಿಸ್ಟರ್ ಏಲಿಕುಟ್ಟಿ, ಕೊಡಗು; ಬುದ್ಧಿಮಾಂದ್ಯ ಮಕ್ಕಳ ಶಿಕ್ಷಣ-ಉಷಾ ಜೋಸೆಫ್‌ಕುಮಾರ್, ಬೆಂಗಳೂರು; ಜಿ.ಇಂದಿರಾ, ಬೆಂಗಳೂರು ಹಾಗೂ ಗುರುಮೂರ್ತಿ, ಬಳ್ಳಾರಿ.

**2008ನೇ ಸಾಲಿನ ಪ್ರಶಸ್ತಿ**

**ಸಂಸ್ಥೆಗಳ ವಿಭಾಗ:** ಜೆಎಸ್‌ಎಸ್ ಸಹನಾ ಸಮನ್ವಯ ಶಿಕ್ಷಣ ಶಾಲೆ, 38ನೇ ಅಡ್ಡರಸ್ತೆ, 8ನೇ ಬ್ಲಾಕ್, ಜಯನಗರ, ಬೆಂ-82.

ವೈಯಕ್ತಿಕ ವಿಭಾಗ: ಪ್ರಹ್ಲಾದ್ ದೇಸಾಯಿ, ಬೆಂ-94; ವೋಡೇ ಪಿ.ಕೃಷ್ಣ, ಬೆಂ-80; ಇಂತಿಯಾಜ್ ಅಹಮದ್ ಕಚವಿ, ಹಾವೇರಿ ಜಿಲ್ಲೆ; ಲಕ್ಷ್ಮಣ ಸಾತಪ್ಪಾ ಮಗದುಮ್ಮ, ಬೆಳಗಾವಿ ಜಿಲ್ಲೆ; ಎಚ್.ಪಿ.ಉಮಾ, ಬೆಂ-78; ಜಿ.ಎಚ್.ತುಳಸಿಧರ, ಬೆಂ-96, ಜಿ.ಮಂಜುನಾಥ್, ಬೆಂಗಳೂರು; ಪಿ.ಸೋಮಶೇಖರ್, ಬೆಂಗಳೂರು.

ಶಿಕ್ಷಕರ ವಿಭಾಗ: ಸಿ.ಹೇಮಲತಾ, ತುಮಕೂರು ಜಿಲ್ಲೆ; ಕಸ್ತೂರಿ, ದಕ್ಷಿಣಕನ್ನಡ ಜಿಲ್ಲೆ; ರಮೇಶ್, ಚಿಕ್ಕಬಳ್ಳಾಪುರ ಜಿಲ್ಲೆ; ಪಿ.ಅಶೋಕ್‌ಕುಮಾರ್, ದಕ್ಷಿಣಕನ್ನಡ ಜಿಲ್ಲೆ; ವಿಜಯಲಕ್ಷ್ಮೀ ಯಲ್ಲಪ್ಪ ಕಲಾಲ್, ಕೊಪ್ಪಳ ಜಿಲ್ಲೆ.

## ಅಂಗವಿಕಲರಿಗೆ ಮೀಸಲಾತಿ: ಸರ್ಕಾರಿ ಆದೇಶ ಪ್ರಕಟ

ಅಂಗವಿಕಲರಿಗೆ ಸರ್ಕಾರಿ ಉದ್ಯೋಗದಲ್ಲಿ ಮೀಸಲಾತಿ ನೀಡುವ ಸಂಬಂಧ ಸರ್ಕಾರಿ ಆದೇಶ ಹೊರಡಿಸಲಾಗಿದೆ ಎಂದು ಸಚಿವ ನರೇಂದ್ರಸ್ವಾಮಿ ಹೇಳಿದ್ದಾರೆ.

ಎ ಹಾಗೂ ಬಿ ವರ್ಗದಡಿ ಶೇ.3ರಷ್ಟು, ಸಿ ಹಾಗೂ ಡಿ ವರ್ಗದಲ್ಲಿ ಶೇ.5ರಷ್ಟು ಮೀಸಲಾತಿ ನೀಡಲಾಗುತ್ತದೆ. ಈ ಹಿಂದೆ ಹಲವು ಬಾರಿ ಎದ್ದಿದ್ದ ಸಮಸ್ಯೆ ನಿವಾರಿಸುವ ಸಲುವಾಗಿ ಹೊಸದಾಗಿ ಆದೇಶ ಹೊರಡಿಸಲಾಗಿದೆ ಎಂದು ಸಚಿವರು ಸ್ಪಷ್ಟಪಡಿಸಿದರು.

ಇದರ ಜತೆಗೆ ಆಶ್ರಯ ಯೋಜನೆಯಡಿ ಮನೆ ವಿತರಣೆ ಹಾಗೂ ಇತರ ಸರ್ಕಾರಿ ಸವಲತ್ತು ನೀಡುವ ಸೌಲಭ್ಯ ಹೊಂದಲು ಅಂಗವಿಕರಿಗೆ ಶೇ.3ರಷ್ಟು ಮೀಸಲು ಇಡುವಂತೆ ಎಲ್ಲ ಇಲಾಖೆಗಳಿಗೆ ಸೂಚಿಸಲಾಗುವುದು. ಅಂಗವಿಕಲರಿಗೆಂದೇ ಪ್ರತ್ಯೇಕ ನಿಧಿ ಸ್ಥಾಪಿಸಲು ತಾವು ಮುಖ್ಯಮಂತ್ರಿಯವರೊಡನೆ ಚರ್ಚಿಸುವುದಾಗಿ ತಿಳಿಸಿದರು.

ಸಂಯುಕ್ತ ಕರ್ನಾಟಕ

೨-೧೨-೨೦೦೯

# ಸಂಸ್ಥೆ, ವೈಯಕ್ತಿಕ, ವಿಶೇಷ ಶಿಕ್ಷಕರಿಗೆ 31 ಪ್ರಶಸ್ತಿ




ಬೆಂಗಳೂರು, ಡಿ. 1 : ವಿಕಲಚೇತರ ಅಭ್ಯುದಯಕ್ಕಾಗಿ ದುಡಿಯುತ್ತಿರುವ ಸಂಸ್ಥೆ, ವ್ಯಕ್ತಿಗಳನ್ನು ಅಂಗವಿಕಲ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯು 2008–2009ನೆ ಸಾಲಿನ ಪ್ರಶಸ್ತಿಗೆ ಆಯ್ಕೆ ಮಾಡಿದೆ.

ವಿಶ್ವ ಅಂಗವಿಕಲರ ದಿನಾಚರಣೆಯ ಅಂಗವಾಗಿ ಡಿಸೆಂಬರ್ 3ರಂದು ಬಾಲಭವನದಲ್ಲಿ ಹಮ್ಮಿಕೊಂಡಿರುವ ಸಮಾರಂಭದಲ್ಲಿ ಎರಡೂ ಸಾಲಿನ ಪ್ರಶಸ್ತಿಗಳನ್ನು ಪ್ರದಾನ ಮಾಡಲಾಗುವುದು ಎಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಖಾತೆ ಸಚಿವ ಸಿ.ಎಂ. ನರೇಂದ್ರಸ್ವಾಮಿ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ನೆರೆ ಹಾವಳಿ ಹಿನ್ನೆಲೆಯಲ್ಲಿ ಸರಳ ಸಮಾರಂಭ ಹಮ್ಮಿಕೊಳ್ಳಲಾಗಿದ್ದು ಮುಖ್ಯಮಂತ್ರಿ ಯಡಿಯೂರಪ್ಪ ಉದ್ಘಾಟಿಸಲಿದ್ದಾರೆ. ಶಾಸಕ ರೋಷನ್ ಬೇಗ್ ಅಧ್ಯಕ್ಷತೆ ವಹಿಸಲಿದ್ದು, ಸಚಿವರಾದ ಕಟ್ಟಾ ಸುಬ್ರಹ್ಮಣ್ಯ ನಾಯ್ಡು, ಆರ್. ಅಶೋಕ್ ಶ್ರೀರಾಮುಲು ಉಪಸ್ಥಿತರಿರುತ್ತಾರೆ. ತಾವು ಪ್ರಶಸ್ತಿಗಳನ್ನು ಪ್ರದಾನ ಮಾಡಲಿರುವುದಾಗಿ ಸಚಿವರು ವಿವರಿಸಿದರು.

ಕಳೆದ ಸಾಲಿನ ಪ್ರಶಸ್ತಿ ನೀಡುವ ಸಂದರ್ಭದಲ್ಲಿ ಮಾಜಿ ಪ್ರಧಾನಿ ವಿ.ಪಿ. ಸಿಂಗ್ ನಿಧನದ ಹಿನ್ನೆಲೆಯಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಮುಂದೂಡಲಾಗಿತ್ತು. ಅದನ್ನು ಈ ವರ್ಷ ವಿತರಣೆ ಮಾಡಲಾಗುತ್ತಿದೆ ಎಂದರು.

**2008ನೇ ಸಾಲಿನ ಪ್ರಶಸ್ತಿಗಳು**

ಬೆಂಗಳೂರಿನ ಜೆಎಸ್‌ಎಸ್ ಸಹನಾ ಸಮನ್ವಯ ಶಿಕ್ಷಣ ಶಾಲೆಗೆ ಸಂಸ್ಥೆ ಪ್ರಶಸ್ತಿಗೆ ಆಯ್ಕೆಯಾಗಿದೆ.

ವೈಯಕ್ತಿಕ ಪ್ರಶಸ್ತಿಗೆ ಬೆಂಗಳೂರಿನ ಪ್ರಹ್ಲಾದ ದೇಸಾಯಿ, ವಡೇ ಪಿ. ಕೃಷ್ಣ, ಹಾವೇರಿ ಜಿಲ್ಲೆ ರಾಣೆಬೆನ್ನೂರಿನ ಇಂತಿಯಾಜ್ ಅಹಮದ್ ಕಚವಿ, ಬೆಳಗಾವಿ ಜಿಲ್ಲೆಯ ರಾಯಭಾಗ್‌ನ ವೈಕರ್ನಾಟಕ ತಾಲ್ಲೂಕು ಅಂಗವಿಕಲರ ಸಂಸ್ಥೆಯ ಲಕ್ಷ್ಮಣ ಸಾತಪ್ಪ ಮಗದುಮ್ಮ, ಬೆಂಗಳೂರಿನ ನಂದಿನಿ ಬಡಾವಣೆಯ ಜಿ.ಎಚ್. ತುಳಸೀಧರ, ಜೆ.ಪಿ.ನಗರದ ಎಚ್. ಉಮಾ, ಸಿಟಿ ಮಾರುಕಟ್ಟೆಯ ಜಿ. ಮಂಜುನಾಥ್, ರಾಜಾಜಿನಗರದ ಸಿ. ಸೋಮಶೇಖರ್.

ವಿಶೇಷ ಶಿಕ್ಷಕರ ಪ್ರಶಸ್ತಿಗೆ ತುಮಕೂರಿನ ಹೇಮಲತಾ ಸಿ., ದಕ್ಷಿಣ ಕನ್ನಡ ಜಿಲ್ಲೆ ವಾಮಂಜೂರಿನ ಕುಮಾರಿ ಕಸ್ತೂರಿ, ಚಿಕ್ಕಬಳ್ಳಾಪುರದ ಸಂಪನ್ಮೂಲ ಶಿಕ್ಷಕ ರಮೇಶ್, ದಕ್ಷಿಣ ಕನ್ನಡದ ವಾಮಂಜೂರಿನ ಅಶೋಕ್ ಕುಮಾರ್, ಕೊಪ್ಪಳದ ವಿಜಯಲಕ್ಷ್ಮಿ ಯಲ್ಲಪ್ಪ ಕಲಾಲ್.

**2009ನೇ ಸಾಲಿನ ಪ್ರಶಸ್ತಿಗಳು**

ಸಂಸ್ಥೆಗಳ ಪ್ರಶಸ್ತಿಗೆ ಕೋಲಾರ ಜಿಲ್ಲೆ ಕೆಜಿಎಫ್‌ನ ರಮಣ ಮಹರ್ಷಿ ಟ್ರಸ್ಟ್ ಫಾರ್ ಡಿಸೇಬಲ್ಡ್ ಪರ್ಸನ್ಸ್, ಬೆಂಗಳೂರಿನ ಯಲಹಂಕದ ಮಾತೃ ಅಂಧರ ಶಿಕ್ಷಣ ಸಂಸ್ಥೆ, ಗುಲ್ಬರ್ಗಾದ ನ್ಯಾಷನಲ್ ಬಂಜಾರ ಶಿಕ್ಷಣ ಸಂಸ್ಥೆ, ಕೊಡಗು ಜಿಲ್ಲೆ ಸುಂಟಿಕೊಪ್ಪದ ಸ್ವಸ್ಥ ವಿಶೇಷ ಶಿಕ್ಷಣ ಮತ್ತು ಪುನರ್ವಸತಿ ಕೇಂದ್ರ.

ವೈಯಕ್ತಿಕ ಪ್ರಶಸ್ತಿಗೆ ಬೆಂಗಳೂರಿನ ಮಹಂತೇಶ್ ಜಿ. ಕಿವುಡ ಸಣ್ಣವರ್, ಉಮೇಶ್ ಎಸ್. ಕುಲಕರ್ಣಿ, ಉಡುಪಿಯ ವಿಲಿಯಮ್ ಡೇಸಾ, ವಿಲ್ಫ್ರೆಡ್ ಗೋಮ್ಸ್, ಬೆಂಗಳೂರಿನ ಆರ್. ಗುರುರಾವ್, ತುಮಕೂರಿನ ಲೋಕೇಶ್ ಜಿ., ಬಾಗಲಕೋಟೆ ಜಿಲ್ಲೆ ಜಮಖಂಡಿಯ ಪ್ರಕಾಶ ಹಣಮಂತ ಹರಿಜನ (ಕಾಂಬಳೆ), ಬೀದರ್‌ನ ಧಣಕ ಸಂತೋಷ್.

ವಿಶೇಷ ಶಿಕ್ಷಕರ ಪ್ರಶಸ್ತಿಗೆ ಕೊಡಗು ಜಿಲ್ಲೆ ದೇವರಪುರದ ಸಿಸ್ಟರ್ ವಿಲಿಕುಟ್ಟಿ, ಬೆಂಗಳೂರಿನ ಬಸವರಾಜು, ಉಷಾ ಜೋಸೆಫ್ ಕುಮಾರ್, ಇಂದಿರಾ ಜಿ., ಬಳ್ಳಾರಿಯ ಗುರುಮೂರ್ತಿ.

**ಇಂದು ಸಾಂಸ್ಕೃತಿಕ ಕಾರ್ಯಕ್ರಮ**

ಅಂಗವಿಕಲ ಮಕ್ಕಳಿಗಾಗಿ ಬಾಲಭವನದಲ್ಲಿ ನಾಳೆ (ಡಿ. 2) ಅಂಗವಿಕಲ ಮಕ್ಕಳಿಗಾಗಿ ಚಿತ್ರಕಲಾ ರಚನೆ ಸ್ಪರ್ಧೆ ಹಮ್ಮಿಕೊಳ್ಳಲಾಗಿದೆ. ಅಲ್ಲದೆ, ಸಾಂಸ್ಕೃತಿಕ ಕಾರ್ಯಕ್ರಮ ಹಮ್ಮಿಕೊಂಡಿದ್ದು, 600 ಮಕ್ಕಳು ಭಾಗವಹಿಸಿ ತಮ್ಮ ಪ್ರತಿಭೆಗಳನ್ನು ಪ್ರದರ್ಶಿಸಲಿದ್ದಾರೆ ಎಂದು ಸಚಿವರು ವಿವರಿಸಿದರು.

ದಿ ಟೈಮ್ಸ್ ಆಫ್ ಇಂಡಿಯಾ, ಬೆಂಗಳೂರು
ಬುಧವಾರ, ಡಿಸೆಂಬರ್ 2, 2009

# ಅಂಗವಿಕಲರ ಕಲ್ಯಾಣಕ್ಕೆ ದುಡಿದವರಿಗೆ ಪ್ರಶಸ್ತಿ ಪ್ರಕಟ

ಟೈಮ್ಸ್ ನ್ಯೂಸ್ ನೆಟ್‌ವರ್ಕ್

**ಬೆಂಗಳೂರು:** ವಿಶ್ವ ಅಂಗವಿಕಲರ ದಿನಾಚರಣೆ ಸಂದರ್ಭದಲ್ಲಿ ವಿಕಲಚೇತನರ ಅಭಿವೃದ್ಧಿಗೆ ಶ್ರಮಿಸುತ್ತಿರುವ ಸಂಸ್ಥೆ, ವ್ಯಕ್ತಿ ಹಾಗೂ 'ವಿಶೇಷ ಶಿಕ್ಷಣದ ಶಿಕ್ಷಕರಿಗೆ ನೀಡುವ ರಾಜ್ಯ ಪ್ರಶಸ್ತಿಗಳನ್ನು ಸರ್ಕಾರ ಮಂಗಳವಾರ ಪ್ರಕಟಿಸಿದೆ.

2008 ಹಾಗೂ 2009ನೇ ಸಾಲಿನ ಪ್ರಶಸ್ತಿ ಪುರಸ್ಕೃತರ ಪಟ್ಟಿಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವ ಪಿ.ಎಂ. ನರೇಂದ್ರಸ್ವಾಮಿ ಮಂಗಳವಾರ ಪತ್ರಿಕಾ ಗೋಷ್ಠಿಯಲ್ಲಿ ಪ್ರಕಟಿಸಿದರು. ಮಾಜಿ ಪ್ರಧಾನಿ ವಿ.ಪಿ.ಸಿಂಗ್ ನಿಧನದ ಹಿನ್ನೆಲೆಯಲ್ಲಿ ಕಳೆದ ವರ್ಷ ಅಂಗವಿಕಲರ ದಿನ ಆಚರಿಸಿರಲಿಲ್ಲ; ಪ್ರಶಸ್ತಿಗಳನ್ನೂ ಪ್ರಕಟಿಸಿರಲಿಲ್ಲ.

ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ನೀಡುವ ಪ್ರಶಸ್ತಿಗೆ ಆಯ್ಕೆಯಾಗಿರುವ ಸಂಸ್ಥೆಗಳು ತಲಾ 25,000 ರೂ.; ವ್ಯಕ್ತಿಗಳು ಮತ್ತು ವಿಶೇಷ ಶಿಕ್ಷಣದ ಶಿಕ್ಷಕರು ತಲಾ 10,000 ರೂ. ನಗದು ಪುರಸ್ಕಾರ ಪಡೆಯಲಿದ್ದಾರೆ.

2008-09ರ ಸಾಲಿನ ಪ್ರಶಸ್ತಿಗೆ ವೈಯಕ್ತಿಕ ವಿಭಾಗದಲ್ಲಿ ಬೆಂಗಳೂರಿಗೆ ಸಿಂಹಪಾಲು ದಕ್ಕಿದೆ. ಎಂಟು ಜನರ ಪೈಕಿ ಶೇಷಾದ್ರಿಪುರ ದತ್ತಿ ಶಿಕ್ಷಣ ಸಂಸ್ಥೆ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಸೇರಿದಂತೆ ಆರು ಮಂದಿ ಉದ್ಯಾನ ನಗರಿಯವರು. ಇದೇ ವರ್ಷದ ಸಂಸ್ಥೆ ಪ್ರಶಸ್ತಿಯನ್ನು ಜಯನಗರದ ಜೆಎಸ್ಎಸ್ ಸಹನಾ ಸಮನ್ವಯ ಶಿಕ್ಷಣ ಶಾಲೆ ಪಡೆದುಕೊಂಡಿದೆ.

**ಪಟ್ಟಿ ಇಂತಿದೆ (ಆವರಣದಲ್ಲಿ ಸೇವೆ ಸಲ್ಲಿಸುತ್ತಿರುವ ಕ್ಷೇತ್ರ):**

**2008:** ವೈಯಕ್ತಿಕ ಪ್ರಶಸ್ತಿ- ಬೆಂಗಳೂರಿನ ಪ್ರಹ್ಲಾದ್ ದೇಸಾಯಿ (ಅಂಧರು), ವೂಡೇ ಪಿ.ಕೃಷ್ಣ (ಸಾಮಾನ್ಯ), ಜಿ.ಎಚ್. ತುಳಸೀಧರ, ಎಚ್.ಪಿ.ಉಮಾ, ಜಿ. ಮಂಜುನಾಥ್, ಪಿ.ಸೋಮಶೇಖರ್ (ದೈಹಿಕ ಅಂಗವಿಕಲರು), ಇಮ್ತಿಯಾಜ್ ಅಹಮದ್ ಕಚವಿ ರಾಣೇಬೆನ್ನೂರು, ಲಕ್ಷ್ಮಣ ಸಾತಪ್ಪಾ ಮಗದುಮ್ಮ ರಾಯಭಾಗ (ದೈಹಿಕ ಅಂಗವಿಕಲರು).

**ವಿಶೇಷ ಶಿಕ್ಷಕರು:** ಸಿ.ಹೇಮಲತಾ ತುಮಕೂರು (ಶ್ರವಣದೋಷವುಳ್ಳ ಮಕ್ಕಳ ಶಿಕ್ಷಣ), ಕಸ್ತೂರಿ ಮಂಗಳೂರು (ಅಂಧ ಮಕ್ಕಳ ಶಿಕ್ಷಣ), ರಮೇಶ್ ಚಿಕ್ಕಬಳ್ಳಾಪುರ (ಸಂಪನ್ಮೂಲ ಶಿಕ್ಷಕ), ಪಿ.ಅಶೋಕ್ ಕುಮಾರ್ ಮಂಗಳೂರು (ಬಹುವಿಧ ಅಂಗವಿಕಲ ಮಕ್ಕಳ ಶಿಕ್ಷಣ), ವಿಜಯಲಕ್ಷ್ಮಿ ಯಲ್ಲಪ್ಪ ಕಲಾಲ್ ಗಂಗಾವತಿ (ಬುದ್ಧಿಮಾಂದ್ಯ ಮಕ್ಕಳ ಶಿಕ್ಷಣ).

**2009:** ಸಂಸ್ಥೆಗಳು- ರಮಣ ಮಹರ್ಷಿ ಟ್ರಸ್ಟ್ ಫಾರ್ ಡಿಸೇಬಲ್ಡ್ ಪರ್ಸನ್ಸ್ ಕೋಲಾರ, ಮಾತೃ ಅಂಧರ ಶಿಕ್ಷಣ ಸಂಸ್ಥೆ ಬೆಂಗಳೂರು, ನ್ಯಾಷನಲ್ ಬಂಜಾರ ಶಿಕ್ಷಣ ಸಂಸ್ಥೆ ಗುಲ್ಬರ್ಗ, 'ಸ್ವಸ್ಥ' ವಿಶೇಷ ಶಿಕ್ಷಣ ಮತ್ತು ಪುನರ್ವಸತಿ ಕೇಂದ್ರ ಸುಂಟಿಕೊಪ್ಪ.

**ವೈಯಕ್ತಿಕ ಪ್ರಶಸ್ತಿ:** ಬೆಂಗಳೂರಿನ ಮಹಾಂತೇಶ ಜಿ.ಕಿವುಡಸಣ್ಣವರ್ (ಅಂಧರು), ಅಖಿಲ ಕರ್ನಾಟಕ ಅಂಗವಿಕಲರ ಹೋರಾಟ ಸಮಿತಿ ಸಂಸ್ಥಾಪಕ ರಾಜ್ಯಾಧ್ಯಕ್ಷ ಉಮೇಶ್ ಎಸ್.ಕುಲಕರ್ಣಿ (ಸಾಮಾನ್ಯ), ಆರ್.ಗುರುರಾವ್ (ದೈಹಿಕ ಅಂಗವಿಕಲರು); ಉಡುಪಿಯ ವಿಲಿಯಮ್ ಡೇಸಾ ಮತ್ತು ವಿಲ್ಫ್ರೆಡ್ ವಿ. ಗೋಮ್ಸ್, ತುಮಕೂರಿನ ಜಿ.ಲೋಕೇಶ್, ಜಮಖಂಡಿಯ ಪ್ರಕಾಶ ಹಣಮಂತ ಹರಿಜನ, ಬೀದರ್‌ನ ಢಣಕೆ ಸಂತೋಷ್ (ದೈಹಿಕ ಅಂಗವಿಕಲರು).

**ವಿಶೇಷ ಶಿಕ್ಷಕರು:** ನಗರದ ಬಸವರಾಜು (ಅಂಧ ಮಕ್ಕಳ ಶಿಕ್ಷಣ), ಉಷಾ ಜೋಸೆಫ್ ಕುಮಾರ್ ಮತ್ತು ಜೆ. ಇಂದಿರಾ (ಬುದ್ಧಿಮಾಂದ್ಯ ಮಕ್ಕಳ ಶಿಕ್ಷಣ), ಕೊಡಗು ಜಿಲ್ಲೆ ದೇವಪುರದ ಸಿಸ್ಟರ್ ಏಲಿಕುಟ್ಟಿ (ಶ್ರವಣದೋಷವುಳ್ಳ ಮಕ್ಕಳ ಶಿಕ್ಷಣ), ಬಳ್ಳಾರಿಯ ಗುರುಮೂರ್ತಿ (ಬುದ್ಧಿಮಾಂದ್ಯ ಮಕ್ಕಳ ಶಿಕ್ಷಣ).

**ಕ್ಯಾಲೆಂಡರ್ ಬಿಡುಗಡೆ:** ಡಿ.3ರಂದು ನಗರದ ಬಾಲಭವನದಲ್ಲಿ ನಡೆಯುವ ವಿಶ್ವಅಂಗವಿಕಲರ ದಿನಾಚರಣೆ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು. ಅಂಧರಿಗಾಗಿ ಬ್ರೈಲ್ ಲಿಪಿಯಲ್ಲಿ ಪ್ರಕಟಿಸಲಾಗಿರುವ 2010ನೇ ಇಸವಿಯ ಕ್ಯಾಲೆಂಡರ್ ಬಿಡುಗಡೆ ಮಾಡಲಾಗುವುದು ಎಂದು ಸಚಿವ ನರೇಂದ್ರಸ್ವಾಮಿ ತಿಳಿಸಿದರು. ವಿಕಲಚೇತನ ಮಕ್ಕಳಿಗೆ ಬಾಲಭವನದಲ್ಲಿ ಬುಧವಾರ ಚಿತ್ರಕಲಾ ಸ್ಪರ್ಧೆ, ಸಾಂಸ್ಕೃತಿಕ ಕಾರ್ಯಕ್ರಮ ಆಯೋಜಿಸಲಾಗಿದೆ. 600ಕ್ಕೂ ಹೆಚ್ಚು ಮಕ್ಕಳು ಭಾಗವಹಿಸುವ ನಿರೀಕ್ಷೆ ಇದೆ ಎಂದು ಹೇಳಿದರು.

**[illegible]**



**ಬೆಂಗಳೂರು:** ವಿಶ್ವ ಅಂಗವಿಕಲರ ದಿನದ ಸಂದರ್ಭದಲ್ಲಿ ವೀಲ್ ಚೇರ್ ಬಳಸುತ್ತಿರುವ ಅಂಗವಿಕಲರಿಗೆ ಸಂತಸದ ಸುದ್ದಿ. ಭಾರತೀಯ ಹವಾಗುಣಕ್ಕೆ ಸರಿಹೊಂದುವ ಎಲೆಕ್ಟ್ರಿಕ್ ವೀಲ್ ಚೇರ್‌ಗಳು ಕೇವಲ 39,000 ರೂ.ಗೆ ದೊರೆಯಲಿವೆ.

ಆಸ್ಟ್ರಿಚ್ ಮೊಬಿಲಿಟಿ ಇನ್ಸ್ಟ್ರುಮೆಂಟ್ ಕಂಪನಿ ಈ ಚೇರ್‌ಗಳನ್ನು ಅಭಿವೃದ್ಧಿಪಡಿಸಿದೆ. 39,000 ರೂ.ನಿಂದ 1.48 ಲಕ್ಷ ರೂ.ವರೆಗೂ ಎಲೆಕ್ಟ್ರಿಕ್ ಚೇರ್‌ಗಳು ದೊರೆಯಲಿವೆ. ಮಧ್ಯಮ ಮಾದರಿ ಚೇರ್ 98,000 ರೂ.ಗೆ ಸಿಗಲಿದೆ. ಸತತ ಎಂಟು ಗಂಟೆ ಚಾರ್ಜ್ ಮಾಡಿದರೆ, ಈ ವೀಲ್ ಚೇರ್‌ಗಳು ಕ್ರಮವಾಗಿ 8, 15 ಮತ್ತು 25 ಕಿ.ಮೀ. ಚಲಿಸಲಿವೆ. ಮೂಲ ಮಾದರಿ ಫೆಮೋ ವೀಲ್ ಚೇರ್‌ನಲ್ಲಿ ಕೈ ಮತ್ತು ಕಾಲನ್ನು ಸರಿಯಾಗಿ ಇಟ್ಟುಕೊಳ್ಳಲು ಬದಲಾವಣೆ ಮಾಡಿಕೊಳ್ಳುವ ಅವಕಾಶವಿದೆ. ವಿಶಾಲ ಕುಷನ್ ಸೀಟ್ ಇದೆ. ಜೊತೆಗೆ ಹಿಂಬದಿ ಸೀಟು ತೆಗೆದು ಇಡಬಹುದಾದ ಸೌಕರ್ಯವೂ ಇದೆ. ಎಂಟು ಗಂಟೆ ಪೂರ್ಣವಾಗಿ ಚಾರ್ಜ್ ಮಾಡಿದರೆ, ಎಂಟು ಕಿ.ಮೀ. ಚಲಿಸುತ್ತದೆ.

ಅತ್ಯಾಧುನಿಕ ಮಾದರಿ ವೀಲ್‌ಚೇರ್‌ಗಳಲ್ಲಿ ಸ್ಲಿಟ್ ಫ್ರೇಮ್ ತಂತ್ರಜ್ಞಾನ ಹಾಗೂ ಮಲ್ಟಿ ಸಸ್‌ಪೆನ್ಷನ್ ಕಾಯಿಲ್ ಸಿಸ್ಟಮ್ ಅಳವಡಿಸಲಾಗಿದೆ. ಈ ತಂತ್ರಜ್ಞಾನದಿಂದ ಗರಿಷ್ಠ ಚಾಲನಾ ನಿಯಂತ್ರಣ ಸಾಧ್ಯವಾಗಲಿದೆ. ಮಲ್ಟಿ ಸಸ್‌ಪೆನ್ಷನ್ ಕಾಯಿಲ್ ಸಿಸ್ಟಮ್‌ನಿಂದ ಶೇ. 80ರಷ್ಟು ಅಲುಗಾಡುವುದನ್ನು ಕಡಿಮೆ ಮಾಡುತ್ತದೆ.

# ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಪ್ರಶಸ್ತಿ ಪ್ರಕಟ



## ಅಂಗವಿಕಲರ ಕಲ್ಯಾಣಕ್ಕೆ ಶ್ರಮ

ಬೆಂಗಳೂರು, ಡಿ. 1: ವಿಶ್ವ ಅಂಗವಿಕಲ ದಿನಾಚರಣೆಯ ಅಂಗವಾಗಿ ಈ ಕ್ಷೇತ್ರದಲ್ಲಿ ವಿಶೇಷ ಸಾಧನೆ ಮಾಡಿದವರಿಗೆ ಹಾಗೂ ಅಂಗವಿಕಲರ ಕಲ್ಯಾಣಕ್ಕೆ ದುಡಿದ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ರಾಜ್ಯ ಸರ್ಕಾರ ಪ್ರಶಸ್ತಿಯನ್ನು ಪ್ರಕಟಿಸಿದೆ.

ವಿಶ್ವ ಅಂಗವಿಕಲರ ದಿನಾಚರಣೆಯ ಅಂಗವಾಗಿ ಡಿ. 3ರಂದು ಬಾಲಭವನದಲ್ಲಿ ನಡೆಯಲಿರುವ ಸಮಾರಂಭದಲ್ಲಿ 2008 ಮತ್ತು 2009ನೇ ಸಾಲಿನ ಪ್ರಶಸ್ತಿಗಳನ್ನು ಪ್ರದಾನ ಮಾಡಲಾಗುವುದು ಎಂದು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವ ಪಿ.ಎಂ. ನರೇಂದ್ರಸ್ವಾಮಿ ಇಂದು ಸುದ್ದಿಗೋಷ್ಠಿಯಲ್ಲಿ ಪ್ರಕಟಿಸಿದರು.

**2008ನೇ ಸಾಲಿನ ಪ್ರಶಸ್ತಿಗಳು:** ಸಂಸ್ಥೆ: ಬೆಂಗಳೂರಿನ ಜೆಎಸ್‌ಎಸ್ ಸಹನಾ ಸಮನ್ವಯ ಶಿಕ್ಷಣ ಶಾಲೆ

**ವೈಯಕ್ತಿಕ ಪ್ರಶಸ್ತಿಗಳು:** ಬೆಂಗಳೂರಿನ ಪ್ರಹ್ಲಾದ್ ದೇಸಾಯಿ (ಅಂಧರು), ವೂಡೇ ಪಿ. ಕೃಷ್ಣ (ಸಾಮಾನ್ಯ), ರಾಣಿಬೆನ್ನೂರಿನ ಇಂತಿಯಾಜ್ ಅಹಮದ್ ಕಚವಿ, ಬೆಳಗಾವಿಯ ಲಕ್ಷ್ಮಣ ಸಾತಪ್ಪಾ ಮಗದುಮ್ಮ ಬೆಂಗಳೂರಿನ ಬಿ.ಎಚ್. ತುಳಸೀಧರ, ಎಚ್.ಪಿ. ಉಮಾ, ಜಿ. ಮಂಜುನಾಥ್ ಮತ್ತು ಪಿ. ಸೋಮ ಶೇಖರ್ (ದೈಹಿಕ ಅಂಗವಿಕಲರು)

**ವಿಶೇಷ ಶಿಕ್ಷಕರ ಪ್ರಶಸ್ತಿ:** ತುಮಕೂರಿನ ಹೇಮಲತಾ ಸಿ., ಮಂಗಳೂರಿನ ಕುಮಾರಿ ಕಸ್ತೂರಿ, ಚಿಕ್ಕಬಳ್ಳಾಪುರದ ರಮೇಶ್, ಮಂಗಳೂರಿನ ಅಶೋಕ್ ಕುಮಾರ್ ಪಿ., ಗಂಗಾವತಿಯ ವಿಜಯಲಕ್ಷ್ಮಿ ಯಲ್ಲಪ್ಪ ಕಲಾಲ್

**2009ನೇ ಸಾಲಿನ ಪ್ರಶಸ್ತಿಗಳ ಸಂಸ್ಥೆಗಳು:** ಬಂಗಾರಪೇಟೆಯ ಶ್ರೀ ರಮಣ ಮಹರ್ಷಿ ಟ್ರಸ್ಟ್ ಫಾರ್ ಡಿಸೇಬಲ್ಡ್ ಪರ್ಸನ್ಸ್, ಬೆಂಗಳೂರಿನ ಮಾತೃ ಅಂಧರ ಶಿಕ್ಷಣ ಸಂಸ್ಥೆ, ಗುಲ್ಬರ್ಗದ ನ್ಯಾಷನಲ್ ಬಂಜಾರ ಶಿಕ್ಷಣ ಸಂಸ್ಥೆ, ಸುಂಟಿಕೊಪ್ಪದ ಸ್ವಸ್ಥ ವಿಶೇಷ ಶಿಕ್ಷಣ ಮತ್ತು ಪುನರ್ವಸತಿ ಕೇಂದ್ರ.

**ವೈಯಕ್ತಿಕ ಪ್ರಶಸ್ತಿಗಳು:** ಬೆಂಗಳೂರಿನ ಮಹಂತೇಶ್ ಜಿ. ಕಿವುಡ ಸಣ್ಣವರ್ (ಅಂಧರು), ಉಮೇಶ್ ಎಸ್. ಕುಲಕರ್ಣಿ (ಸಾಮಾನ್ಯ), ಉಡುಪಿಯ ವಿಲಿಯಮ್ ಡೇಸಾ, ವಿಲ್ಪ್ರೆಡ್ ವಿ. ಗೋಮ್ಸ್, ಬೆಂಗಳೂರಿನ ಆರ್. ಗುರುರಾವ್, ತುಮಕೂರಿನ ಜಿ. ಲೋಕೇಶ್, ಜಮಖಂಡಿಯ ಪ್ರಕಾಶ ಹಣಮಂತ ಹರಿಜನ, ಬೀದರ್‌ನ ಥಣಕೆ ಸಂತೋಷ್ (ದೈಹಿಕ ಅಂಗವಿಕಲರು)

**ವಿಶೇಷ ಶಿಕ್ಷಕರ ಪ್ರಶಸ್ತಿ:** ಕೊಡಗಿನ ಸಿಸ್ಟರ್ ಏಲಿಕುಟ್ಟಿ, ಬೆಂಗಳೂರಿನ ಬಸವರಾಜು, ಉಷಾ ಜೋಸೆಫ್ ಕುಮಾರ್, ಇಂದಿರಾ ಜೆ., ಬಳ್ಳಾರಿಯ ಗುರುಮೂರ್ತಿ.

ಪ್ರಜಾವಾಣಿ ಬುಧವಾರ 2ನೇ ಡಿಸೆಂಬರ್ 2009

# ಸಿಟಿ ಸಮಾಚಾರ



ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಉತ್ತರ ಕರ್ನಾಟಕದ ನೆರೆ ಸಂತ್ರಸ್ತರ ಪರಿಹಾರ ನಿಧಿಗೆ 50 ಲಕ್ಷ ರೂಪಾಯಿ ಚೆಕನ್ನು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರಿಗೆ ನೀಡಿದರು. ಶಾಸಕ ಎಂ.ಆರ್.ದೊರೆಸ್ವಾಮಿ, ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ, ಸಂಸ್ಥೆಯ ಪದಾಧಿಕಾರಿಗಳಾದ ಟಿ.ಎಸ್.ಹೆಂಜಾರಪ್ಪ, ಡಬ್ಲ್ಯು.ಎಚ್.ಅನಿಲ್‌ಕುಮಾರ್, ಬಿ.ಎಂ.ಪಾರ್ಥಸಾರಥಿ, ಎ.ಆರ್.ಶ್ರೀನಿವಾಸಯ್ಯ, ಸರೋಜಾ ನಂಜಪ್ಪ ಇದ್ದಾರೆ.

ಸಂಜೆವಾಣಿ ಬುಧವಾರ 2 ಡಿಸೆಂಬರ್ 2009



ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಅವರು ಉತ್ತರ ಕರ್ನಾಟಕ ನೆರೆ ಸಂತ್ರಸ್ತರ ಪರಿಹಾರ ನಿಧಿಗೆ ರೂ. 50 ಲಕ್ಷ ಚೆಕ್ಕನ್ನು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರಿಗೆ ನೀಡಿದರು. ಶಾಸಕ ಪ್ರೊ. ಎಂ.ಆರ್. ದೊರೆಸ್ವಾಮಿ, ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ, ಸಂಸ್ಥೆಯ ಪದಾಧಿಕಾರಿಗಳಾದ ಟಿ.ಎಸ್. ಹೆಂಜಾರಪ್ಪ, ಡಬ್ಲ್ಯು.ಹೆಚ್. ಅನಿಲ್ ಕುಮಾರ್, ಬಿ.ಎಂ. ಪಾರ್ಥಸಾರಥಿ, ಎ.ಆರ್. ಶ್ರೀನಿವಾಸಯ್ಯ ಹಾಗೂ ಸರೋಜಾ ನಂಜಪ್ಪ ಉಪಸ್ಥಿತರಿದ್ದರು.

ಉದಯವಾಣಿ

ಬುಧವಾರ 2 ಡಿಸೆಂಬರ್ 2009



## ಪರಿಹಾರ ನಿಧಿ ಚೆಕ್...

ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ದತ್ತಿ ಪತಿಯಿಂದ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಮಂಗಳವಾರ ಮುಖ್ಯಮಂತ್ರಿಯವರ ಪರಿಹಾರ ನಿಧಿಗೆ 50 ಲಕ್ಷ ರೂ. ಮೊತ್ತದ ಚೆಕ್ ಸ್ವೀಕರಿಸಿದರು. ಸಂಸ್ಥೆಯ ಪ್ರೊಡೇ ಪಿ. ಕೃಷ್ಣ ವಿಧಾನ ಪರಿಷತ್ ಸದಸ್ಯ ಪ್ರೊ। ಎಂ.ಆರ್. ದೊರೆಸ್ವಾಮಿ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಬುಧವಾರ 2ನೇ ಡಿಸೆಂಬರ್ 2009

# ಸಿಟಿ ಸಮಾಚಾರ



ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಉತ್ತರ ಕರ್ನಾಟಕದ ನೆರೆ ಸಂತ್ರಸ್ತರ ಪರಿಹಾರ ನಿಧಿಗೆ 50 ಲಕ್ಷ ರೂಪಾಯಿ ಚೆಕನ್ನು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರಿಗೆ ನೀಡಿದರು. ಶಾಸಕ ಎಂ.ಆರ್.ದೊರೆಸ್ವಾಮಿ, ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ, ಸಂಸ್ಥೆಯ ಪದಾಧಿಕಾರಿಗಳಾದ ಟಿ.ಎಸ್.ಹೆಂಜಾರಪ್ಪ, ಡಬ್ಲ್ಯು.ಎಚ್.ಅನಿಲ್‌ಕುಮಾರ್, ಬಿ.ಎಂ.ಪಾರ್ಥಸಾರಥಿ, ಎ.ಆರ್.ಶ್ರೀನಿವಾಸಯ್ಯ, ಸರೋಜಾ ನಂಜಪ್ಪ ಇದ್ದಾರೆ.

ಈ ಸಂಜೆ

ಮಂಗಳವಾರ
01-12-2009



ನೆರೆ ಸಂತ್ರಸ್ತರಿಗೆ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ನೀಡಿದ 50 ಲಕ್ಷ ರೂ. ನೆರವಿನ ಚೆಕ್ ಅನ್ನು ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪಗೆ ಹಸ್ತಾಂತರಿಸಿದರು. ಶಾಸಕ ಪ್ರೊ.ಎಂ. ದೊರೆಸ್ವಾಮಿ, ಡಾ.ವೂಡೆ ಪಿ.ಕೃಷ್ಣ ಹಾಜರಿದ್ದರು.

ಈ ಸಂಜೆ
ಮಂಗಳವಾರ
01-12-2009

# ವಿಕಲಚೇತನರಿಗೆ ರಾಜ್ಯ ಪ್ರಶಸ್ತಿ

## 3ರಂದು ಬಾಲಭವನದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ

ಬೆಂಗಳೂರು ,ಡಿ.1-ಅಂಗವಿಕಲರ ಕ್ಷೇತ್ರದಲ್ಲಿ ವಿಶೇಷ ಸೇವೆ ಸಲ್ಲಿಸಿದ ಸಂಸ್ಥೆ ಹಾಗೂ ವ್ಯಕ್ತಿಗಳಿಗೆ 2008-09ನೆಸಾಲಿನ ರಾಜ್ಯ ಪ್ರಶಸ್ತಿ ನೀಡಲಾಗುವುದು ಎಂದು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವ ಸಿ.ಎಂ. ನರೇಂದ್ರಸ್ವಾಮಿ ತಿಳಿಸಿದರು.



ನಗರದಲ್ಲಿಂದು ಸುದ್ದಿಗಾರರನ್ನುದ್ದೇಶಿಸಿ ಅವರು ಮಾತನಾಡಿ, 2 ವರ್ಷಗಳಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಹಾಗೂ ಸಂಸ್ಥೆಗಳಿಗೆ ಸುಮಾರು 30 ರಾಜ್ಯ ಪ್ರಶಸ್ತಿ ನೀಡಲು ಉದ್ದೇಶಿಸಿದ್ದು, ಡಿ.3ರಂದು ಬಾಲಭವನದಲ್ಲಿ ಈ ಪ್ರಶಸ್ತಿ ಪ್ರದಾನ ಮಾಡಲಾಗುವುದೆಂದರು.

2008ನೆ ಸಾಲಿನ ವೈಯಕ್ತಿಕ ಪ್ರಶಸ್ತಿಗೆ ಪ್ರಹ್ಲಾದ್ ದೇಸಾಯಿ (ಅಂಧರು), ಪೂಡೆ ಪಿ. ಕೃಷ್ಣ(ಸಾಮಾನ್ಯ), ದೈಹಿಕ ಅಂಗವಿಕಲರ ಕ್ಷೇತ್ರದಲ್ಲಿ ಇಮ್ತಿಯಾಜ್ ಅಹ್ಮದ್ ಕಸಬಿ, ಲಕ್ಷ್ಮಣ್ ದಾಸಪ್ಪ ಮಗದುಮ್ಮ, ತುಳಸೀಧರ, ಉಮಾ, ಡಿ. ಮಂಜುನಾಥ್, ಸೋಮಶೇಖರ್ ಅವರನ್ನು ಆಯ್ಕೆ ಮಾಡಲಾಗಿದೆ ಎಂದರು.

ವಿಶೇಷ ಶಿಕ್ಷಕರ ಪ್ರಶಸ್ತಿಗಾಗಿ ಹೇಮಲತಾ (ಶ್ರವಣ ದೋಷವುಳ್ಳ ಮಕ್ಕಳ ಶಿಕ್ಷಣ ), ಕುಮಾರಿ ಕಸ್ತೂರಿ (ಅಂಧ ಮಕ್ಕಳ ಶಿಕ್ಷಣ), ರಮೇಶ್ (ಸಂಪನ್ಮೂಲ ಶಿಕ್ಷಕರು), ಅಶೋಕ್ ಕುಮಾರ್ ಅವರನ್ನು ಬಹುವಿಧ ಅಂಗವಿಕಲ ಮಕ್ಕಳ ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗೆ ಆಯ್ಕೆ ಮಾಡಲಾಗಿದೆ ಎಂದರು. 2009ನೆ ಸಾಲಿನ ಪ್ರಶಸ್ತಿಗೆ ಕೋಲಾರ ಜಿಲ್ಲೆಯ ರಮಣ ಮಹರ್ಷಿ ಟ್ರಸ್ಟ್ ಫಾರ್ ಡಿಸೇಬಲ್ಡ್ ಪರ್ಸನ್, ಯಲಹಂಕ ಉಪನಗರದ ಮಾತೃ ಅಂಧರ ಶಿಕ್ಷಣ ಸಂಸ್ಥೆ ಗುಲ್ಬರ್ಗಾದ ನ್ಯಾಷನಲ್ ಬಂಜಾರ ಶಿಕ್ಷಣ ಸಂಸ್ಥೆ ಕೊಡಗಿನ ಸ್ವಸ್ಥ ವಿಶೇಷ ಶಿಕ್ಷಣ ಮತ್ತು ಪುನರ್ವಸತಿ ಕೇಂದ್ರಗಳನ್ನು ಆಯ್ಕೆ ಮಾಡಲಾಗಿದೆ ಎಂದರು.

2009ನೆ ಸಾಲಿನ ವೈಯಕ್ತಿಕ ಪ್ರಶಸ್ತಿಗಾಗಿ ಮಹಂತೇಶ್ ಜಿ. ಕಿವುಡ ಸಣ್ಣವರ್ (ಅಂಧರು), ಉಮೇಶ್ ಎಸ್. ಕುಲಕರ್ಣಿ (ಸಾಮಾನ್ಯ) ದೈಹಿಕ ಅಂಗವಿಕಲರ ಕ್ಷೇತ್ರದಲ್ಲಿ ವಿಲಿಯಂ ಬೆಸ್, ವಿಲ್ ಫ್ರೆಡ್ ಗೋಮ್ಸ್, ಗುರುರಾಜ್ ಲೋಕೇಶ್, ಪ್ರಕಾಶ್ ಹಣಮಂತ ಹರಿಜನ (ಕಾಂಬ್ಳೆ), ಧಣಕೆ ಸಂತೋಷ್ ಅವರನ್ನು ಆಯ್ಕೆ ಮಾಡಲಾಗಿದೆ ಎಂದರು.

ವಿಶೇಷ ಶಿಕ್ಷಕರ ಪ್ರಶಸ್ತಿಗಾಗಿ ಸಿಸ್ಟರ್ ವಲಿಕುಟ್ಟಿ (ಶ್ರವಣದೋಷವುಳ್ಳ ಮಕ್ಕಳ ಶಿಕ್ಷಣ), ಬಸವರಾಜು (ಅಂಧ ಮಕ್ಕಳ ಶಿಕ್ಷಣ), ಬುದ್ಧಿಮಾಂದ್ಯ ಮಕ್ಕಳ ಶಿಕ್ಷಣ ಕ್ಷೇತ್ರದಲ್ಲಿ ಉಷಾ ಜೋಸೆಫ್ ಕುಮಾರ್, ಇಂದಿರಾ, ಗುರುಮೂರ್ತಿ ಅವರನ್ನು ಆಯ್ಕೆ ಮಾಡಲಾಗಿದೆ ಎಂದರು.

ಸಂಜೆವಾಣಿ ಬುಧವಾರ 18 ನವೆಂಬರ್ 2009



ಶೇಷಾದ್ರಿಪುರಂ ಶಿಕ್ಷಣ ದತ್ತಿ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಿದ್ದ "ಕರ್ನಾಟಕ ರಾಜ್ಯೋತ್ಸವ" ಹಾಗೂ ಹಿರಿಯ ಸಾಹಿತಿ ಡಾ. ದೊಡ್ಡರಂಗೇಗೌಡ ಅವರ ಬದುಕು ಬರಹ ಕೃತಿಯ ಬಿಡುಗಡೆ ಸಮಾರಂಭವನ್ನು ಬಿ.ಎಂ. ಶ್ರೀ ಪ್ರತಿಷ್ಠಾನದ ಅಧ್ಯಕ್ಷ ಹಾಗೂ ಸಾಹಿತಿ ಡಾ. ಪಿ.ವಿ. ನಾರಾಯಣ, ದತ್ತಿ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ, ಪಿ. ಕೃಷ್ಣ ಅವರು ಉದ್ಘಾಟಿಸಿದರು. ಡಾ. ದೊಡ್ಡರಂಗೇ ಗೌಡ, ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ ಮುಂತಾದವರು ಇದ್ದಾರೆ.

ಈ ಸಂಜೆ

ಬುಧವಾರ, 18 ನವೆಂಬರ್, 2009

# ಯುವಕರಲ್ಲಿ ಪುಸ್ತಕ ಸಂಸ್ಕೃತಿ ಬೆಳೆಸಿ

ಬೆಂಗಳೂರು,ನ.18- ಯುವ ಜನಾಂಗ ಮತ್ತು ಸಾಹಿತ್ಯಾಸಕ್ತರು ಪುಸ್ತಕ ಸಂಸ್ಕೃತಿ ಬೆಳೆಸಬೇಕೆಂದು ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ ಹಾಗೂ ಸಾಹಿತಿಗಳಾದ ಡಾ.ಪಿ.ವಿ. ನಾರಾಯಣ ತಿಳಿಸಿದರು.

ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪದವಿ ಪೂರ್ವ ಕಾಲೇಜಿನ ವತಿಯಿಂದ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಹಾಗೂ ಹಿರಿಯ ಸಾಹಿತಿ ಡಾ.ದೊಡ್ಡರಂಗೇಗೌಡರ ಬದುಕು ಬರಹ ಕುರಿತ ಗ್ರಂಥ ಲೋಕಾರ್ಪಣಾ ಕಾರ್ಯಕ್ರಮದಲ್ಲಿ ಅವರು ಮಾತನಾಡಿ, ವಿವೇಕ-ವಿವೇಚನೆಯು ಪುಸ್ತಕದಿಂದ ದೊರೆಯುವ ಕೊಡುಗೆಗಳಾಗಿವೆ ಎಂದರು.

ಖ್ಯಾತ ವಿಮರ್ಶಕರಾದ ಡಾ.ನರಹಳ್ಳಿ ಬಾಲ ಸುಬ್ರಹ್ಮಣ್ಯ ಮಾತನಾಡಿ, ಇಂದಿನ ವಾಣಿಜ್ಯೀಕರಣದ ದಿನಗಳಲ್ಲಿ ಪುಸ್ತಕ ಸಂಸ್ಕೃತಿ ಒಡನಾಟದಿಂದ ಶ್ರೇಷ್ಠ ಮನಸ್ಸುಗಳು ರೂಪುಗೊಳ್ಳುತ್ತವೆ ಎಂದರಲ್ಲದೆ, ಹೊಲಸು ರಾಜಕೀಯದಲ್ಲಿ ಅಜಾತ ಶತ್ರುವೆನಿಸಿದ ಡಾ.ದೊಡ್ಡರಂಗೇಗೌಡರು ಗ್ರಾಮೀಣ ಸಂಸ್ಕೃತಿಯ ಪ್ರತೀಕ.

ಪ್ರತಿಭೆ-ಪರಿಶ್ರಮದ ಸಮ್ಮಿಶ್ರಣದೊಂದಿಗೆ ಸಂಕಲ್ಪ-ದೃಢತೆ-ಛಲಕ್ಕೆ ಸಾಕ್ಷಿಯಾದವರು ಗೌಡರು ಎಂದರು.

ಪ್ರೊ. ಜಿ.ಎಸ್.ಸಿದ್ದಲಿಂಗಯ್ಯ ಮಾತನಾಡಿ,



ಆತ್ಮೀಯತೆ- ಸಹೃದಯತೆ- ಪ್ರೀತಿಯ ಗೆಳೆತನ ದೊಡ್ಡರಂಗೇಗೌಡರ ಬದುಕು ಮತ್ತು ಸಾಹಿತ್ಯದ ಒಟ್ಟು ಆಶಯವಾಗಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಕರ್ನಾಟಕ ರಾಜ್ಯೋತ್ಸವವನ್ನು ಸರಳವಾಗಿ-ಸುಂದರವಾಗಿ ಆಯೋಜಿಸುವ ಮೂಲಕ ಎಲ್ಲಾದರೂ ಇರು ಎಂಥಾದರೂ ಇರು ಎಂದೆಂದಿಗೂ ನೀ ಕನ್ನಡವಾಗಿರು ಎಂಬ ಕವಿ ಕುವೆಂಪುರವರ ಮಾತು ಮತ್ತು ಕಾವ್ಯಾನಂದರು ಏನಾದರೂ ಆಗು ಮೊದಲು ಮಾನವನಾಗು ಎಂಬ ವಾಣಿಯನ್ನು ನೆನಪಿಸಿಕೊಟ್ಟು, ಸಂಸ್ಕೃತಿ ಮತ್ತು ಸಾಹಿತ್ಯ ಇಂದಿನ ಎಲ್ಲರಿಗೂ ಅವಶ್ಯ ಎಂದರು.

ಇದೇ ಶುಭ ಸಂದರ್ಭದಲ್ಲಿ ಡಾ.ದೊಡ್ಡರಂಗೇಗೌಡರನ್ನು ಮತ್ತು ಗೌಡರ ಜೀವನ ಚರಿತ್ರೆ ಬರೆದ ಖ್ಯಾತ ಕಾದಂಬರಿಕಾರ್ತಿ ಪ್ರೇಮಾಭಟ್‌ರವರನ್ನು ಗೌರವಿಸಲಾಯಿತು.

ವೇದಿಕೆಯಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಎ.ಆರ್.ಶ್ರೀನಿವಾಸಯ್ಯ, ಬಿ.ಎಂ. ಪಾರ್ಥಸಾರಥಿ, ಬಿ.ಸಿ.ಲೋಕನಾಥ್, ಎಂ.ಎಸ್.ನಟರಾಜ್, ಕಾಲೇಜಿನ ಪ್ರಾಂಶುಪಾಲ ಪ್ರೊ.ಎಂ.ಆರ್.ಶ್ರೀನಿವಾಸ್, ಕನ್ನಡ ಉಪನ್ಯಾಸಕರುಗಳಾದ ಪ್ರೊ.ಎನ್.ಆರ್. ಹಿರೇಮಠ್, ಬಿ.ಎಸ್.ಅಶೋಕ್ ಕುಮಾರ್ ಉಪಸ್ಥಿತರಿದ್ದರು.

# ದೊಡ್ಡರಂಗೇಗೌಡರ ಬದುಕು-ಬರಹ ಕುರಿತ ಕೃತಿ ಬಿಡುಗಡೆ

ಬೆಂಗಳೂರು, ನ. 16: ಲೇಖಕಿ ಪ್ರೇಮಾಭಟ್ ಅವರು ಸಾಹಿತಿ ಡಾ।ದೊಡ್ಡರಂಗೇಗೌಡರ ಬದುಕು-ಬರಹ ಕುರಿತು ರಚಿಸಿರುವ 'ಬದುಕು ತೋರಿದ ಬೆಳಕು' ಕೃತಿಯನ್ನು ಇಂದಿಲ್ಲಿ ಬಿಡುಗಡೆ ಮಾಡಲಾಯಿತು.

ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ಸಭಾಂಗಣದಲ್ಲಿ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಲೇಖಕ ಡಾ। ಪಿ.ವಿ. ನಾರಾಯಣ ಕೃತಿ ಬಿಡುಗಡೆ ಮಾಡಿದರು.

ಈ ಸಂದರ್ಭದಲ್ಲಿ ಮಾತನಾಡಿದ ಅವರು, ಬವಣೆಯ ನಾಡಿನಿಂದ ಬಂದು ಬವಣೆಯನ್ನೇ ಹಾಡುಗಳನ್ನಾಗಿಸಿದ ಪ್ರೊ।ದೊಡ್ಡರಂಗೇಗೌಡರು ಕನ್ನಡ ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಅಪಾರ. ಅವರ ಸಾಹಿತ್ಯ ಸೇವೆ ಹಾಗೂ ಜೀವನವನ್ನು ನಾಡಿನ ಜನತೆಗೆ ಪರಿಚಯ ಮಾಡಿಸಲು ಪ್ರೇಮಾಭಟ್ ಅವರು ಕೃತಿ ಬರೆದಿರುವುದು ಸಂತಸದ ವಿಷಯ ಎಂದು ಹೇಳಿದರು.



ಬೆಂಗಳೂರಿನ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಸೋಮವಾರ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಕವಿ ಪ್ರೊ। ದೊಡ್ಡರಂಗೇಗೌಡರ ಕುರಿತು ಪ್ರೇಮಾಭಟ್ ಬರೆದಿರುವ 'ಬದುಕು ತೋರಿದ ಬೆಳಕು' ಕೃತಿಯನ್ನು ಲೇಖಕ ಡಾ। ಪಿ.ವಿ.ನಾರಾಯಣ ಬಿಡುಗಡೆ ಮಾಡಿದರು. ಸಾಹಿತಿ ಜಿ.ಎಸ್.ಸಿದ್ದಲಿಂಗಯ್ಯ, ವಿಮರ್ಶಕ ಡಾ।ನರಹಳ್ಳಿ ಬಾಲಸುಬ್ರಹ್ಮಣ್ಯ, ವೂಡೆ ಪಿ.ಕೃಷ್ಣ ಉಪಸ್ಥಿತರಿದ್ದರು.

ದೊಡ್ಡರಂಗೇಗೌಡರು ಸರಳ ಹಾಗೂ ಸಜ್ಜನ. ಮೇಲ್ಮನೆ ಸದಸ್ಯರಾದರೂ ಇಂದಿಗೂ ಅವರು ಶಿಷ್ಯರ ಮೆಚ್ಚಿನ ಮೇಸ್ಟ್ರು. ಅಪಾರ ಪರಿಶ್ರಮದ ಮೂಲಕ ಬೆಳವಣಿಗೆ ಕಂಡವರು ಹಾಗೂ ತುಡಿತಕ್ಕೆ ಒಳಗಾದ ಜನರ ನೋವು ಏನೆಂಬುದನ್ನು ಪದ್ಯ ಹಾಗೂ ಹಾಡುಗಳ ಮೂಲಕ ಬರೆದು ಜನರಿಗೆ ತಲುಪಿಸಿದವರು ಎಂದು ತಿಳಿಸಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಕನ್ನಡ ರಾಜ್ಯೋತ್ಸವ ಕಾರ್ಯಕ್ರಮದಂದು ಪುಸ್ತಕ ಬಿಡುಗಡೆ ಮಾಡುವ ಮೂಲಕ ವಿದ್ಯಾರ್ಥಿಗಳಿಗೆ ಉತ್ತಮ ಮಾರ್ಗದರ್ಶನ ನೀಡುವ ಕೆಲಸ ಮಾಡಿದೆ ಎಂದು ಶ್ಲಾಘಿಸಿದರು.

ಬದುಕು ಬರಹ ಕೃತಿ ಬರೆದ ಪ್ರೇಮಾಭಟ್ ಅವರು ಮಾತನಾಡಿ, ಕನ್ನಡ ಸಾಹಿತ್ಯ ಲೋಕ ಕಂಡ ದಿಗ್ಗಜ ದೊಡ್ಡರಂಗೇಗೌಡರ ಜೀವನ ಬದುಕು ಕುರಿತು ಪುಸ್ತಕ ಬರೆಯಲು ತಮಗೆ ಅವಕಾಶ ಸಿಕ್ಕಿದ್ದು ಪುಣ್ಯ ಎಂದು ಹೇಳಿದರು.

ವಿದ್ಯಾರ್ಥಿಗಳು ಇಂದು ಪುಸ್ತಕ ಓದುವ ಅಭಿರುಚಿಯಿಂದ ದೂರವಾಗುತ್ತಿದ್ದಾರೆ. ಪಠ್ಯಪುಸ್ತಕಗಳು ಭವಿಷ್ಯ ರೂಪಿಸಿದರೆ ಜ್ಞಾನ ಸಂಪಾದನೆಗೆ ಪಠ್ಯೇತರ ಪುಸ್ತಕಗಳು ಅಗತ್ಯ ಎಂದು ತಿಳಿಸಿದರು.

ಆಂಗ್ಲ ವ್ಯಾಮೋಹದಿಂದ ಕನ್ನಡದ ಬಗ್ಗೆ ಇಂದಿನ ವಿದ್ಯಾರ್ಥಿಗಳು ಹೆಚ್ಚು ಆಸಕ್ತಿ ತೋರುತ್ತಿಲ್ಲ. ನಮ್ಮ ಭಾಷೆಯ ಬಗ್ಗೆ ಪ್ರತಿಯೊಬ್ಬರೂ ಪ್ರೀತಿ ಬೆಳೆಸಿಕೊಳ್ಳಬೇಕು ಎಂದು ಹೇಳಿದರು.

ವಿಮರ್ಶಕ ಡಾ। ನರಹಳ್ಳಿ ಬಾಲಸುಬ್ರಹ್ಮಣ್ಯ, ಸಾಹಿತಿ ಪ್ರೊ। ಜಿ.ಎಸ್.ಸಿದ್ದಲಿಂಗಯ್ಯ, ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಾ।ವೂಡೇ ಪಿ.ಕೃಷ್ಣ, ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಮಂಗಳವಾರ, 17 ನವೆಂಬರ್ 2009

## ಕೃತಿ ಬಿಡುಗಡೆ



ಶೇಷಾದ್ರಿಪುರ ಪದವಿ ಪೂರ್ವ ಕಾಲೇಜಿನ ವತಿಯಿಂದ ಆಯೋಜಿಸಿದ್ದ ಕರ್ನಾಟಕ ರಾಜ್ಯೋತ್ಸವ ಹಾಗೂ ಹಿರಿಯ ಸಾಹಿತಿ ಡಾ। ದೊಡ್ಡರಂಗೇಗೌಡರ 'ಬದುಕು ಬರಹ' ಕುರಿತ ಕೃತಿ ಬಿಡುಗಡೆ ಕಾರ್ಯಕ್ರಮವನ್ನು ಪ್ರೊ। ಜಿ.ಎಸ್. ಸಿದ್ದಲಿಂಗಯ್ಯ ಉದ್ಘಾಟಿಸಿದರು.

ಪ್ರಜಾವಾಣಿ

ಸೋಮವಾರ
16ನೇ ನವೆಂಬರ್ 2009

2 B



## ಸಮ್ಮೇಳನ...

ವಿಶ್ವ ಕುಂಚಿಟಿಗರ ಪರಿಷತ್ ಭಾನುವಾರ ನಗರದಲ್ಲಿ ಏರ್ಪಡಿಸಿದ್ದ ಸಮ್ಮೇಳನದಲ್ಲಿ ಬರಹಗಾರ ದಾಸೇಗೌಡ, ಕುಂಚಿಟಿಗರ ಪೀಠಾಧ್ಯಕ್ಷ ಶಾಂತವೀರ ಸ್ವಾಮೀಜಿ, ಮಾಜಿ ಸಚಿವ ಟಿ.ಬಿ. ಜಯಚಂದ್ರ, ಶಿಕ್ಷಣ ತಜ್ಞ ವ್ರೂಡೇ ಪಿ. ಕೃಷ್ಣ, ಬಿ.ಕೆ. ಸೀತಾರಾಮಯ್ಯ ಭಾಗವಹಿಸಿದ್ದರು.

ಸಂಜೆವಾಣಿ
ಭಾನುವಾರ 15 ನವೆಂಬರ್ 2009

# ಪ್ರೇಮಾ ಭಟ್ ಕೃತಿ ಲೋಕಾರ್ಪಣೆ

ಬೆಂಗಳೂರು, ನ. ೧೫- ನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು 54ನೇ ಕನ್ನಡ ರಾಜ್ಯೋತ್ಸವದ ಪ್ರಯುಕ್ತ ಪ್ರೇಮಾ ಭಟ್ ರಚನೆಯ "ಬದುಕು ತೋರಿದ ಬೆಳಕು'' ಡಾ. ದೊಡ್ಡರಂಗೇಗೌಡ ಅವರ ಬದುಕು ಬರಹ ಎಂಬ ಕೃತಿಯ ಲೋಕಾರ್ಪಣೆ ಸಮಾರಂಭವನ್ನು ನಾಳೆ ಬೆಳಿಗ್ಗೆ 11ಕ್ಕೆ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಸಭಾಂಗಣದಲ್ಲಿ ಆಯೋಜಿಸಿದೆ.

ಸಮಾರಂಭದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ, ಪಿ. ಕೃಷ್ಣ ವಹಿಸಲಿದ್ದು ಪ್ರಸಿದ್ಧ ಲೇಖಕ ಡಾ.ಪಿ.ವಿ. ನಾರಾಯಣ ಅವರು ಕೃತಿ ಬಿಡುಗಡೆ ಮಾಡಲಿದ್ದಾರೆ. ಮುಖ್ಯ ಅತಿಥಿಗಳಾಗಿ ಖ್ಯಾತ ವಿಮರ್ಶಕ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ, ಶಿಕ್ಷಣ ಸಂಸ್ಥೆಯ ಸಹ ಕಾರ್ಯದರ್ಶಿ ವಿ. ಆರ್. ಶ್ರೀನಿವಾಸಯ್ಯ ಹಾಗೂ ಖ್ಯಾತ ಕವಿ ವಿಧಾನ ಪರಿಷತ್ ಸದಸ್ಯ ಡಾ. ದೊಡ್ಡರಂಗೇಗೌಡ ಭಾಗವಹಿಸಲಿದ್ದಾರೆ.

ಈ ಸಂಜೆ

ಭಾನುವಾರ, 15 ನವೆಂಬರ್ , 2009



ವಿಶ್ವ ಕುಂಚಿಟಿಗರ ಪರಿಷತ್ ಹಮ್ಮಿಕೊಂಡಿದ್ದ ಕುಂಚಿಟಿಗರ ಜನಜಾಗೃತಿ ಸಭೆಯನ್ನು ಕುಂಚಿಟಿಗ ಮಹಾಸಂಸ್ಥಾನದ ಪೀಠಾಧ್ಯಕ್ಷ ಶ್ರೀ ಶ್ರೀ ಶಾಂತವೀರ ಮಹಾಸ್ವಾಮೀಜಿ ಉದ್ಘಾಟಿಸಿದರು. ಸಮಾಜ ವಿಜ್ಞಾನಿ ಕೊಂಡವಾಡಿ ಕೃಷ್ಣಮೂರ್ತಿ, ಶಿಕ್ಷಣ ತಜ್ಞ ಡಬ್ಲ್ಯೂ.ಪಿ. ಕೃಷ್ಣ ಕುಂಚಿಟಿಗರ ಪರಿಷತ್ ಉಪಾಧ್ಯಕ್ಷ ಕೃಷ್ಣಮೂರ್ತಿ ಮುಂತಾದವರು ಪಾಲ್ಗೊಂಡಿದ್ದರು.

ಸಂಜೆವಾಣಿ
ಶನಿವಾರ 14 ನವೆಂಬರ್ 2009



ಇತ್ತೀಚೆಗೆ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಹಾಗೂ ನಾರಾಯಣ ಹೃದಯಾಲಯ ಏರ್ಪಡಿಸಿದ್ದ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರವನ್ನು ಶಾಸಕ ಡಾ. ಸಿ.ಎನ್. ಅಶ್ವತ್ಥನಾರಾಯಣ ಉದ್ಘಾಟಿಸಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಾಚಾರ್ಯ ಪ್ರೊ. ಗಾಂಧಿ ಡಿ. ಪ್ರಭು, ಸಂಚಾಲಕಿ ಪ್ರೊ. ಬಿ.ಎಲ್. ಗೀತಾ ಹಾಗೂ ಇತರರು ಉಪಸ್ಥಿತರಿದ್ದರು.

ಇಂದು ಸಂಜೆ ಬುಧವಾರ, ನ.11, 2009




ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಹಾಗೂ ನಾರಾಯಣ ಹೃದಯಾಲಯ ಸಂಯುಕ್ತಾಶ್ರಯದಲ್ಲಿ ಏರ್ಪಡಿಸಿದ್ದ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರವನ್ನು ಶಾಸಕ ಡಾ.ಸಿ.ಎನ್.ಅಶ್ವತ್ಥ್‌ನಾರಾಯಣ ಉದ್ಘಾಟಿಸಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಾಚಾರ್ಯ ಪ್ರೊ.ಗಾಂಧಿ ಡಿ.ಪ್ರಭು, ಸಂಚಾಲಕಿ ಪ್ರೊ.ಬಿ.ಎಲ್.ಗೀತಾ ಹಾಗೂ ಇತರರು ಉಪಸ್ಥಿತರಿದ್ದರು.

ಈ ಸಂಜೆ
ಬುಧವಾರ, 11 ನವೆಂಬರ್, 2009



ನಗರದ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಹಾಗೂ ನಾರಾಯಣ ಹೃದಯಾಲಯ ಏರ್ಪಡಿಸಿದ್ದ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರವನ್ನು ಶಾಸಕ ಡಾ.ಸಿ.ಎನ್.ಅಶ್ವತ್ಥ್‌ನಾರಾಯಣ ಉದ್ಘಾಟಿಸಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಕೋಶಾಧ್ಯಕ್ಷ ರಾಜು,ಚಂದ್ರಶೇಖರ್, ಪ್ರಾಚಾರ್ಯ ಪ್ರೊ.ಗಾಂಧಿ ಡಿ.ಪ್ರಭು, ಸಂಚಾಲಕಿ ಪ್ರೊ.ಬಿ.ಎಲ್.ಗೀತಾ ಹಾಗೂ ಇತರರು ಉಪಸ್ಥಿತರಿದ್ದರು.

ಸಂಜೆವಾಣಿ
ಬುಧವಾರ 11 ನವೆಂಬರ್ 2009



ಕಳೆದ 25 ವರ್ಷಗಳಿಂದ ಶುಶ್ರೂಷೆ ಪಡೆಯುತ್ತಿದ್ದ ಹಲಸೂರು ರೆಡ್ ಕ್ರಾಸ್ ಹೋಮ್‌ನ ನಿವಾಸಿ ಅಮೃತ್ಸರ ಮೂಲದ ವಿಕಲಾಂಗ ಯೋಧ ನರೇಂದ್ರಸಿಂಗ್ ಅವರು 8.11.2009ರ ಮುಂಜಾನೆ ನಿಧನ ಹೊಂದಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ. ವೂಡೇ ಪಿ.ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ್, ವೈದ್ಯಕೀಯ ಅಧೀಕ್ಷಕ ಡಾ. ಎನ್.ಜಿ. ನಾರಾಯಣ ಹಾಗೂ ಇತರರು ಅಂತಿಮ ನಮನ ಸಲ್ಲಿಸಿದರು.

ಸಂಯುಕ್ತ ಕರ್ನಾಟಕ । ಬೆಂಗಳೂರು । 11-11-2009



ಶೇಷಾದ್ರಿಪುರಂ ಸಂಜೆ ಕಾಲೇಜಿನಲ್ಲಿ 54ನೇ ಕನ್ನಡ ರಾಜ್ಯೋತ್ಸವ ಪ್ರಯುಕ್ತ ಭಾನುವಾರ ಆಯೋಜಿಸಲಾಗಿದ್ದ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರ ಉದ್ಘಾಟನಾ ಸಂದರ್ಭದಲ್ಲಿ ಮಲ್ಲೇಶ್ವರಂ ಕ್ಷೇತ್ರದ ಶಾಸಕ ಡಾ.ಸಿ.ಎನ್. ಅಶ್ವತ್ಥನಾರಾಯಣ, ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ, ಪ್ರಾಂಶುಪಾಲ ಪ್ರೊ. ಗಾಂಧಿ ಡಿ. ಪ್ರಭು, ಪ್ರೊ. ಗೀತಾ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಬುಧವಾರ, 11 ನವೆಂಬರ್ 2009



## ಕ್ಯಾನ್ಸರ್ ತಪಾಸಣೆ

ಶೇಷಾದ್ರಿಪುರ ಸಂಜೆ ಪದವಿ ಕಾಲೇಜು ಹಾಗೂ ನಾರಾಯಣ ಹೃದಯಾಲಯ ಏರ್ಪಡಿಸಿದ್ದ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರವನ್ನು ಶಾಸಕ ಡಾ|ಸಿ.ಎನ್.ಅಶ್ವತ್ಥ್‌ನಾರಾಯಣ ಉದ್ಘಾಟಿಸಿದರು. ವೂಡೇ ಪಿ.ಕೃಷ್ಣ, ರಾಜು ಚಂದ್ರಶೇಖರ್, ಪ್ರೊ|ಗಾಂಧಿ ಡಿ.ಪ್ರಭು, ಪ್ರೊ|ಬಿ.ಎಲ್.ಗೀತಾ ಮತ್ತಿತರರು ಉಪಸ್ಥಿತರಿದ್ದರು.

ಇಂದು ಸಂಜೆ

ಬುಧವಾರ, ನ.11, 2009




ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಹಾಗೂ ನಾರಾಯಣ ಹೃದಯಾಲಯ ಸಂಯುಕ್ತಾಶ್ರಯದಲ್ಲಿ ಏರ್ಪಡಿಸಿದ್ದ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರವನ್ನು ಶಾಸಕ ಡಾ.ಸಿ.ಎನ್.ಅಶ್ವತ್ಥ್‌ನಾರಾಯಣ ಉದ್ಘಾಟಿಸಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಾಚಾರ್ಯ ಪ್ರೊ.ಗಾಂಧಿ ಡಿ.ಪ್ರಭು, ಸಂಚಾಲಕಿ ಪ್ರೊ.ಬಿ.ಎಲ್.ಗೀತಾ ಹಾಗೂ ಇತರರು ಉಪಸ್ಥಿತರಿದ್ದರು.

ಉದಯವಾಣಿ ನವೆಂಬರ್ 10, 2009

# ಹೃದಯ ತಪಾಸಣಾ ಶಿಬಿರ



ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಮತ್ತು ನಾರಾಯಣ ಹೃದಯಾಲಯ ಜಂಟಿ ಆಶ್ರಯದಲ್ಲಿ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರ ಇತ್ತೀಚೆಗೆ ನಡೆಯಿತು.

ಉದಯವಾಣಿ
ನವೆಂಬರ್ 3, 2009



# 'ಕನ್ನಡಿಗರಿಗೆ ಆದ್ಯತೆ ಹೆಚ್ಚಾಗಲಿ'



ಶೇಷಾದ್ರಿಪುರ

ರಾಷ್ಟ್ರೀಕೃತ ಬ್ಯಾಂಕ್‌ಗಳ 'ಸಿ' ಮತ್ತು 'ಡಿ' ಹುದ್ದೆಗಳಲ್ಲಿ ಕನ್ನಡಿಗರಿಗೆ ಹೆಚ್ಚಿನ ಆದ್ಯತೆ ಸಿಗಬೇಕು. ರಾಜ್ಯದಲ್ಲಿ ಇರುವ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಕನ್ನಡಿಗರಿಗೆ ಹೆಚ್ಚಿನ ಉದ್ಯೋಗವ ಕಾಶಗಳು ಸಿಗಬೇಕೆಂದು ಶಾಸಕ ದಿನೇಶ್ ಗುಂಡೂರಾವ್ ಹೇಳಿದರು.

ಶೇಷಾದ್ರಿಪುರಂ ಕಾಲೇಜಿನಲ್ಲಿ ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ಏರ್ಪಡಿಸಿದ್ದ ಎಸ್‌ಬಿಐ ಬ್ಯಾಂಕಿನ ಗುಮಾಸ್ತರ ಹುದ್ದೆಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗೆ ಉಚಿತ ತರಬೇತಿ ಶಿಬಿರದ ಉದ್ಘಾಟನಾ ಸಮಾರಂಭ ಉದ್ದೇಶಿಸಿ ಅವರು ಮಾತನಾಡಿದರು.

'ಸಿ' ಮತ್ತು 'ಡಿ' ಹುದ್ದೆಗಳಿಗೂ ಅಖಿಲ ಭಾರತ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆ ಅನವಶ್ಯಕ. ಇಂತಹ ಹುದ್ದೆಗಳಲ್ಲಿ ಆಯಾಯ ರಾಜ್ಯದವರಿಗೆ ಹೆಚ್ಚಿನ ಆದ್ಯತೆ ಸಿಗಬೇಕಾದುದು ನ್ಯಾಯ ಸಮ್ಮತ ರಾಜ್ಯದ ಬ್ಯಾಂಕ್‌ಗಳಲ್ಲಿ ಸ್ಥಳೀಯರಿಗೆ ವಂಚನೆ ಆಗದಂತೆ ಆಡಳಿತ ಮಂಡಳಿ ಗಮನ ಹರಿಸ ಬೇಕು ಎಂದು ಹೇಳಿದರು.

ಕನ್ನಡಪರ ಸಂಘಟನೆಗಳು ಹೋರಾಟಗಳನ್ನು ನಡೆಸುವ ಜೊತೆಗೆ ಕನ್ನಡಿಗರು ಸ್ಪರ್ಧಾತ್ಮಕ ಪರೀಕ್ಷೆಗಳ ಸವಾಲುಗಳನ್ನು ಎದುರಿಸುವಂತಹ ತರಬೇತಿ ಮತ್ತು ಮಾರ್ಗದರ್ಶನ ಮಾಡುವ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬೇಕು ಎಂದರು.

ಒಕ್ಕೂಟದ ಅಧ್ಯಕ್ಷ ಕೆ. ಪ್ರಭಾಕರ ರೆಡ್ಡಿ ಸಭೆಯ ಅಧ್ಯಕ್ಷತೆ ವಹಿಸಿದ್ದರು, ಶೇಷಾದ್ರಿಪುರಂ ಕಾಲೇಜಿನ ಗೌ. ಪ್ರ. ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಚೈತ್ರ ಬುಕ್ ಹೌಸ್‌ನ ಮಾಲೀಕ ಬಿ.ಎಸ್. ವಸಂತ ಕುಮಾರ್, ಒಕ್ಕೂಟದ ಕಾರ್ಯಾಧ್ಯಕ್ಷ ಕನ್ನಡ ಕಟ್ಟಾಳು ಸಿದ್ದಯ್ಯ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಕನ್ನಡಪ್ರಭ, ಸೋಮವಾರ, 2 ನವೆಂಬರ್ 2009



## ತರಬೇತಿಗೆ ಚಾಲನೆ

ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟವು ಎಸ್‌ಬಿಎಂನ ಗುಮಾಸ್ತರ ಹುದ್ದೆಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗೆ ಏರ್ಪಡಿಸಿರುವ ಉಚಿತ ತರಬೇತಿ ಶಿಬಿರಕ್ಕೆ ಶಾಸಕ ದಿನೇಶ್ ಗುಂಡೂರಾವ್ ಚಾಲನೆ ನೀಡಿದರು. ವೂಡೇ ಕೃಷ್ಣ, ವಸಂತಕುಮಾರ್, ಪ್ರಭಾಕರ ರೆಡ್ಡಿ, ಸಿದ್ದಯ್ಯ ಇದ್ದರು.

ಪ್ರಜೆಗಳಾಗುವಂತೆ ದೇಶಪ್ರೇಮಿಗಳಗುವಂತೆ ರೂಪಿಸುವುದೇ ನಮ್ಮ ಗುರಿ. ಅದಕ್ಕಾಗಿಯೇ ಶಿಕ್ಷಕರ ಕೊರತೆ ಎದುರಾಗಬಾರದೆಂದು ಈ ವಿಷಯದಲ್ಲಿ ಆದ್ಯತೆ ನೀಡಲಾಗಿದೆ. ವಿದ್ಯಾರ್ಥಿಗಳು ಮತ್ತು ಅವರ ಪೋಷಕರಿಂದ ಹಣ ಸುಲಿಗೆಗೆ ಹೋಗದೆ ಮಾನವೀಯ ನೆಲೆಯಲ್ಲಿ ಶಿಕ್ಷಣ ನೀಡುವ ಗುರಿ ಹೊಂದಲಾಗಿದೆ ಎಂದು ವೂಡೇ ಪಿ. ಕೃಷ್ಣ ಹೇಳುತ್ತಾರೆ.

ನಮ್ಮಲ್ಲಿನ 24 ಶಿಕ್ಷಣ ಸಂಸ್ಥೆಗಳಲ್ಲಿ ಬೋಧಕ ಮತ್ತು ಬೋಧಕೇತರರು ಸೇರಿ 1 ಸಾವಿರ ಮಂದಿ ಸಿಬ್ಬಂದಿಯನ್ನು ಹೊಂದಲಾಗಿದೆ. ಇವರ ಮೂಲಕ ಮಕ್ಕಳಿಗೆ ನಾಯಕತ್ವದ ಗುಣಗಳನ್ನು ಬೆಳೆಸುವಂತಹ ಶಿಕ್ಷಣ ನೀಡಲಾಗುತ್ತದೆ ಎಂದು ಹೇಳುತ್ತಾರೆ.

ಪ್ರಸ್ತುತ ಶೇಷಾದ್ರಿಪುರಂ ಶಿಕ್ಷಣ ದತ್ತಿ ಮೂಲಕ ನರ್ಸರಿಯಿಂದ ಪ್ರೌಢಶಾಲೆ ಹಂತದವರೆಗೆ ನಂತರ ಪಿಯು, ಪದವಿ ಕಾಲೇಜುಗಳನ್ನು ತೆರೆಯಲಾಗಿದೆ. ಕಾಲೇಜುಗಳಲ್ಲಿ ಬಿ.ಎ, ಬಿ.ಕಾಂ, ಬಿ.ಎಸ್ಸಿ, ಡಿಪ್ಲೊಮ ಇನ್ ಫಾರ್ಮಸಿ, ಡಿ.ಎಡ್, ಎಂ.ಬಿ.ಎ, ಬಿ.ಬಿ.ಎಂ, ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಎಂ.ಎ. ಕಲಿಸಲಾಗುತ್ತಿದೆ. ಈ ಕಾಲೇಜುಗಳಿಗೆ ನ್ಯಾಕ್ ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳು ಮಾನ್ಯತೆ ನೀಡಿವೆ.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಶಾಲಾ-ಕಾಲೇಜುಗಳಲ್ಲಿ ಅಂತಾರಾಷ್ಟ್ರೀಯ ಗುಣಮಟ್ಟದ ಶಿಕ್ಷಣ ನೀಡಲಾಗುತ್ತಿದ್ದರೂ, ವಿದ್ಯಾರ್ಥಿಗಳಲ್ಲಿ ದೇಶಭಕ್ತಿ, ಸಾಮಾಜಿಕ ಕಾಳಜಿಯನ್ನು ಪ್ರಥಮಾದ್ಯತೆಯ ಮೇಲೆ ಕಲಿಸಲಾಗುತ್ತಿದೆ. ಸಂಸ್ಥೆಯ ಎಲ್ಲ ಶಾಲಾ-ಕಾಲೇಜುಗಳ ಗ್ರಂಥಾಲಯಗಳಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹನೀಯರ ಚರಿತ್ರೆಯ ಪುಸ್ತಕಗಳನ್ನು ಇಡಲಾಗಿದೆ. ಇದನ್ನು ಕಡ್ಡಾಯವಾಗಿ ಪ್ರತಿಯೊಬ್ಬರೂ ಓದಿ ತಿಳಿದುಕೊಳ್ಳಲು ಶಿಕ್ಷಕರು ಸೂಚಿಸುವುದರಿಂದ ಪ್ರತಿಯೊಬ್ಬ ವಿದ್ಯಾರ್ಥಿಗೂ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಸಾಮಾನ್ಯ ತಿಳಿವಳಿಕೆ ಸಿಗುವಂತಾಗಿದೆ.



ಸ್ವತಃ ವೂಡೇ ಪಿ. ಕೃಷ್ಣ ಅವರೇ ರಕ್ತದಾನಿಯಾಗಿರುವುದರಿಂದ ಆಕಸ್ಮಿಕ ಸಂದರ್ಭದಲ್ಲಿ ಕಷ್ಟದಲ್ಲಿ ಸಿಲುಕುವ ರೋಗಿಗಳಿಗೆ ರಕ್ತದ ಸಹಾಯ ಮಾಡಲು ವಿದ್ಯಾರ್ಥಿಗಳಿಗೆ ಅರಿವು ಮೂಡಿಸಿರುವುದರಿಂದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಎಲ್ಲ ಶಾಖೆಗಳಲ್ಲಿ ಆಗಾಗ ನಿಯಮಿತವಾಗಿ ರಕ್ತದಾನ ಶಿಬಿರ ಏರ್ಪಡಿಸಿ ರೆಡ್ ಕ್ರಾಸ್ ಸಂಸ್ಥೆಗೆ ರಕ್ತದಾನ ಮಾಡುವ ಮೂಲಕ ಬೆಂಗಳೂರು ನಗರದಲ್ಲೇ ಈ ಶಿಕ್ಷಣ ಸಂಸ್ಥೆ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ಇದಕ್ಕೆ ವೂಡೇ ಪಿ. ಕೃಷ್ಣರ ಶ್ರಮ ಕೂಡಾ ಸಾಕಷ್ಟಿದೆ ಎಂದರೆ ತಪ್ಪಲ್ಲ. ಈ ಶಿಕ್ಷಣ ಸಂಸ್ಥೆಯಲ್ಲಿ ವ್ಯಾಸಂಗ ಮಾಡುವ ಪ್ರತಿಯೊಬ್ಬ ವಿದ್ಯಾರ್ಥಿ/ವಿದ್ಯಾರ್ಥಿನಿ ದೇಶದ ಆಸ್ತಿಯಾಗಬೇಕು ಎಂದು ಬಯಸಿ ಅದಕ್ಕೆ ತಕ್ಕಂತೆ ಶಿಕ್ಷಣ ಕೊಡಿಸುವತ್ತ ಆದ್ಯತೆ ನೀಡಿದ್ದಾರೆ.

ಇವರ ಕಾಳಜಿಯಿಂದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಕಲಿಯುವ ಮಕ್ಕಳು ಇಂದು ಉತ್ತಮ ಪ್ರಜೆಗಳಾಗಿ ರೂಪುಗೊಳ್ಳುತ್ತಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

ಈ ಶಿಕ್ಷಣ ಸಂಸ್ಥೆಯಲ್ಲಿ ದಾಖಲಾಗುವ ಪ್ರತಿಯೊಂದು ಮಕ್ಕಳಿಗೂ ಪ್ರಾಥಮಿಕ ಹಂತದಿಂದಲೇ ದೇಶಭಕ್ತಿ ಸಾಮಾಜಿಕ ಕಳಕಳಿಯ ಬಗ್ಗೆ ಅರಿವು ಮೂಡಿಸಿ ಸಮಾಜದಲ್ಲಿ ಹೇಗೆ ಬಾಳಬೇಕು ಎಂಬುದರ ಬಗ್ಗೆ ಪ್ರಾಥಮಿಕ ಹಂತದಲ್ಲೇ ತಿಳಿ ಹೇಳುತ್ತಿರುವುದು ಸಂಸ್ಥೆಯ ವಿಶೇಷತೆ.

ಕ್ರೀಡೆ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಿಯಮಿತವಾಗಿ ನಡೆಸಿಕೊಂಡು ವಿದ್ಯಾರ್ಥಿಗಳಲ್ಲಿರುವ ಪ್ರತಿಭೆಯನ್ನು ಹೊರಗೆ ತರುವ ಕಾರ್ಯದತ್ತಲೂ ಶಿಕ್ಷಣ ಸಂಸ್ಥೆ ಆದ್ಯ ಗಮನ ನೀಡುತ್ತಿದೆ. ಪ್ರತಿ ವರ್ಷ ಆಗಾಗ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು, ಬಹುತೇಕ ನಾಡಿನ ಸಂಸ್ಕೃತಿಯನ್ನು ಬಿಂಬಿಸುವ ಕಾರ್ಯಕ್ರಮಗಳಿಗೆ ಒತ್ತು ನೀಡಲಾಗುತ್ತಿದೆ.

ಈ ಶಿಕ್ಷಣ ಸಂಸ್ಥೆಯಲ್ಲಿ ದಾಖಲಾಗುವ ಪ್ರತಿಯೊಂದು ಮಗುವಿಗೂ ದೇಶದ ಸಂಸ್ಕೃತಿಯ ಪಾಲನೆ ಬಗ್ಗೆ ಮೊದಲು ಅರಿವು ಮೂಡಿಸುವ ಕಾರ್ಯ ಮಾಡಲಾಗುವುದಲ್ಲದೆ, ಅದನ್ನು ಪಾಲಿಸುವಂತೆ ಮನದಟ್ಟು ಮಾಡಲಾಗುತ್ತದೆ. ಆದರೂ ಸ್ವದೇಶದಲ್ಲಿ ಮಾತ್ರವಲ್ಲದೆ ವಿದೇಶದಲ್ಲಿ ಕಾರ್ಯನಿಮಿತ್ತ ಹೋದಾಗಲೂ ನಮ್ಮ ಸಂಸ್ಕೃತಿಗೆ ಒತ್ತು ನೀಡಿ ಆ ದೇಶದ ಬಗ್ಗೆಯೂ ಗೌರವ ಇಟ್ಟುಕೊಳ್ಳುವಂತೆ ಕಿವಿಮಾತು ಹೇಳಲಾಗುತ್ತದೆ.

ಶಿಕ್ಷಣ ಸಂಸ್ಥೆ ವಿವಿಧೆಡೆ ಪ್ರಾರಂಭಿಸಿರುವ ಶಾಲಾ-ಕಾಲೇಜುಗಳಲ್ಲಿ ನುರಿತ ಶಿಕ್ಷಕರು ಮತ್ತು ಶಿಕ್ಷಕೇತರರನ್ನು ನೇಮಕ ಮಾಡಿಕೊಂಡಿರುವುದರಿಂದ ಮಕ್ಕಳಿಗೆ ಕಲಿಕೆಗೆ ಯಾವುದೇ ತೊಂದರೆ ಉಂಟಾಗಿಲ್ಲ. ಮಕ್ಕಳ ಬೆಳವಣಿಗೆಗೆ ಅಗತ್ಯವಾದ ಶಿಕ್ಷಣ ನೀಡುವಲ್ಲಿ ಶಿಕ್ಷಕರು ಒತ್ತು ನೀಡುತ್ತಿದ್ದಾರೆ. ಇದರಿಂದ ಯಾವುದೇ ವಿದ್ಯಾರ್ಥಿ ಮೇಲೆ ಒತ್ತಡ ಉಂಟಾಗುತ್ತಿಲ್ಲ ಎಂದು ಹೇಳಬಹುದಾಗಿದೆ.

– ಪ್ರ.ಸಂ.

ಪ್ರಜೆಗಳಾಗುವಂತೆ ದೇಶಪ್ರೇಮಿಗಳಗುವಂತೆ ರೂಪಿಸುವುದೇ ನಮ್ಮ ಗುರಿ. ಅದಕ್ಕಾಗಿಯೇ ಶಿಕ್ಷಕರ ಕೊರತೆ ಎದುರಾಗಬಾರದೆಂದು ಈ ವಿಷಯದಲ್ಲಿ ಆದ್ಯತೆ ನೀಡಲಾಗಿದೆ. ವಿದ್ಯಾರ್ಥಿಗಳು ಮತ್ತು ಅವರ ಪೋಷಕರಿಂದ ಹಣ ಸುಲಿಗೆಗೆ ಹೋಗದೆ ಮಾನವೀಯ ನೆಲೆಯಲ್ಲಿ ಶಿಕ್ಷಣ ನೀಡುವ ಗುರಿ ಹೊಂದಲಾಗಿದೆ ಎಂದು ವೂಡೇ ಪಿ. ಕೃಷ್ಣ ಹೇಳುತ್ತಾರೆ.

ನಮ್ಮಲ್ಲಿನ 24 ಶಿಕ್ಷಣ ಸಂಸ್ಥೆಗಳಲ್ಲಿ ಬೋಧಕ ಮತ್ತು ಬೋಧಕೇತರರು ಸೇರಿ 1 ಸಾವಿರ ಮಂದಿ ಸಿಬ್ಬಂದಿಯನ್ನು ಹೊಂದಲಾಗಿದೆ. ಇವರ ಮೂಲಕ ಮಕ್ಕಳಿಗೆ ನಾಯಕತ್ವದ ಗುಣಗಳನ್ನು ಬೆಳೆಸುವಂತಹ ಶಿಕ್ಷಣ ನೀಡಲಾಗುತ್ತದೆ ಎಂದು ಹೇಳುತ್ತಾರೆ.

ಪ್ರಸ್ತುತ ಶೇಷಾದ್ರಿಪುರಂ ಶಿಕ್ಷಣ ದತ್ತಿ ಮೂಲಕ ನರ್ಸರಿಯಿಂದ ಪ್ರೌಢಶಾಲೆ ಹಂತದವರೆಗೆ ನಂತರ ಪಿಯು, ಪದವಿ ಕಾಲೇಜುಗಳನ್ನು ತೆರೆಯಲಾಗಿದೆ. ಕಾಲೇಜುಗಳಲ್ಲಿ ಬಿ.ಎ, ಬಿ.ಕಾಂ, ಬಿ.ಎಸ್ಸಿ, ಡಿಪ್ಲೊಮ ಇನ್ ಫಾರ್ಮಸಿ, ಡಿ.ಎಡ್, ಎಂ.ಬಿ.ಎ, ಬಿ.ಬಿ.ಎಂ, ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಎಂ.ಎ. ಕಲಿಸಲಾಗುತ್ತಿದೆ. ಈ ಕಾಲೇಜುಗಳಿಗೆ ನ್ಯಾಕ್ ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳು ಮಾನ್ಯತೆ ನೀಡಿವೆ.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಶಾಲಾ-ಕಾಲೇಜುಗಳಲ್ಲಿ ಅಂತಾರಾಷ್ಟ್ರೀಯ ಗುಣಮಟ್ಟದ ಶಿಕ್ಷಣ ನೀಡಲಾಗುತ್ತಿದ್ದರೂ, ವಿದ್ಯಾರ್ಥಿಗಳಲ್ಲಿ ದೇಶಭಕ್ತಿ, ಸಾಮಾಜಿಕ ಕಾಳಜಿಯನ್ನು ಪ್ರಥಮಾದ್ಯತೆಯ ಮೇಲೆ ಕಲಿಸಲಾಗುತ್ತಿದೆ. ಸಂಸ್ಥೆಯ ಎಲ್ಲ ಶಾಲಾ-ಕಾಲೇಜುಗಳ ಗ್ರಂಥಾಲಯಗಳಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹನೀಯರ ಚರಿತ್ರೆಯ ಪುಸ್ತಕಗಳನ್ನು ಇಡಲಾಗಿದೆ. ಇದನ್ನು ಕಡ್ಡಾಯವಾಗಿ ಪ್ರತಿಯೊಬ್ಬರೂ ಓದಿ ತಿಳಿದುಕೊಳ್ಳಲು ಶಿಕ್ಷಕರು ಸೂಚಿಸುವುದರಿಂದ ಪ್ರತಿಯೊಬ್ಬ ವಿದ್ಯಾರ್ಥಿಗೂ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಸಾಮಾನ್ಯ ತಿಳಿವಳಿಕೆ ಸಿಗುವಂತಾಗಿದೆ.



ಸ್ವತಃ ವೂಡೇ ಪಿ. ಕೃಷ್ಣ ಅವರೇ ರಕ್ತದಾನಿಯಾಗಿರುವುದರಿಂದ ಆಕಸ್ಮಿಕ ಸಂದರ್ಭದಲ್ಲಿ ಕಷ್ಟದಲ್ಲಿ ಸಿಲುಕುವ ರೋಗಿಗಳಿಗೆ ರಕ್ತದ ಸಹಾಯ ಮಾಡಲು ವಿದ್ಯಾರ್ಥಿಗಳಿಗೆ ಅರಿವು ಮೂಡಿಸಿರುವುದರಿಂದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಎಲ್ಲ ಶಾಖೆಗಳಲ್ಲಿ ಆಗಾಗ ನಿಯಮಿತವಾಗಿ ರಕ್ತದಾನ ಶಿಬಿರ ಏರ್ಪಡಿಸಿ ರೆಡ್ ಕ್ರಾಸ್ ಸಂಸ್ಥೆಗೆ ರಕ್ತದಾನ ಮಾಡುವ ಮೂಲಕ ಬೆಂಗಳೂರು ನಗರದಲ್ಲೇ ಈ ಶಿಕ್ಷಣ ಸಂಸ್ಥೆ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ಇದಕ್ಕೆ ವೂಡೇ ಪಿ. ಕೃಷ್ಣರ ಶ್ರಮ ಕೂಡಾ ಸಾಕಷ್ಟಿದೆ ಎಂದರೆ ತಪ್ಪಲ್ಲ. ಈ ಶಿಕ್ಷಣ ಸಂಸ್ಥೆಯಲ್ಲಿ ವ್ಯಾಸಂಗ ಮಾಡುವ ಪ್ರತಿಯೊಬ್ಬ ವಿದ್ಯಾರ್ಥಿ/ವಿದ್ಯಾರ್ಥಿನಿ ದೇಶದ ಆಸ್ತಿಯಾಗಬೇಕು ಎಂದು ಬಯಸಿ ಅದಕ್ಕೆ ತಕ್ಕಂತೆ ಶಿಕ್ಷಣ ಕೊಡಿಸುವತ್ತ ಆದ್ಯತೆ ನೀಡಿದ್ದಾರೆ.

ಇವರ ಕಾಳಜಿಯಿಂದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಕಲಿಯುವ ಮಕ್ಕಳು ಇಂದು ಉತ್ತಮ ಪ್ರಜೆಗಳಾಗಿ ರೂಪುಗೊಳ್ಳುತ್ತಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

ಈ ಶಿಕ್ಷಣ ಸಂಸ್ಥೆಯಲ್ಲಿ ದಾಖಲಾಗುವ ಪ್ರತಿಯೊಂದು ಮಕ್ಕಳಿಗೂ ಪ್ರಾಥಮಿಕ ಹಂತದಿಂದಲೇ ದೇಶಭಕ್ತಿ ಸಾಮಾಜಿಕ ಕಳಕಳಿಯ ಬಗ್ಗೆ ಅರಿವು ಮೂಡಿಸಿ ಸಮಾಜದಲ್ಲಿ ಹೇಗೆ ಬಾಳಬೇಕು ಎಂಬುದರ ಬಗ್ಗೆ ಪ್ರಾಥಮಿಕ ಹಂತದಲ್ಲೇ ತಿಳಿ ಹೇಳುತ್ತಿರುವುದು ಸಂಸ್ಥೆಯ ವಿಶೇಷತೆ.

ಕ್ರೀಡೆ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಿಯಮಿತವಾಗಿ ನಡೆಸಿಕೊಂಡು ವಿದ್ಯಾರ್ಥಿಗಳಲ್ಲಿರುವ ಪ್ರತಿಭೆಯನ್ನು ಹೊರಗೆ ತರುವ ಕಾರ್ಯದತ್ತಲೂ ಶಿಕ್ಷಣ ಸಂಸ್ಥೆ ಆದ್ಯ ಗಮನ ನೀಡುತ್ತಿದೆ. ಪ್ರತಿ ವರ್ಷ ಆಗಾಗ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು, ಬಹುತೇಕ ನಾಡಿನ ಸಂಸ್ಕೃತಿಯನ್ನು ಬಿಂಬಿಸುವ ಕಾರ್ಯಕ್ರಮಗಳಿಗೆ ಒತ್ತು ನೀಡಲಾಗುತ್ತಿದೆ.

ಈ ಶಿಕ್ಷಣ ಸಂಸ್ಥೆಯಲ್ಲಿ ದಾಖಲಾಗುವ ಪ್ರತಿಯೊಂದು ಮಗುವಿಗೂ ದೇಶದ ಸಂಸ್ಕೃತಿಯ ಪಾಲನೆ ಬಗ್ಗೆ ಮೊದಲು ಅರಿವು ಮೂಡಿಸುವ ಕಾರ್ಯ ಮಾಡಲಾಗುವುದಲ್ಲದೆ, ಅದನ್ನು ಪಾಲಿಸುವಂತೆ ಮನದಟ್ಟು ಮಾಡಲಾಗುತ್ತದೆ. ಆದರೂ ಸ್ವದೇಶದಲ್ಲಿ ಮಾತ್ರವಲ್ಲದೆ ವಿದೇಶದಲ್ಲಿ ಕಾರ್ಯನಿಮಿತ್ತ ಹೋದಾಗಲೂ ನಮ್ಮ ಸಂಸ್ಕೃತಿಗೆ ಒತ್ತು ನೀಡಿ ಆ ದೇಶದ ಬಗ್ಗೆಯೂ ಗೌರವ ಇಟ್ಟುಕೊಳ್ಳುವಂತೆ ಕಿವಿಮಾತು ಹೇಳಲಾಗುತ್ತದೆ.

ಶಿಕ್ಷಣ ಸಂಸ್ಥೆ ವಿವಿಧೆಡೆ ಪ್ರಾರಂಭಿಸಿರುವ ಶಾಲಾ-ಕಾಲೇಜುಗಳಲ್ಲಿ ನುರಿತ ಶಿಕ್ಷಕರು ಮತ್ತು ಶಿಕ್ಷಕೇತರರನ್ನು ನೇಮಕ ಮಾಡಿಕೊಂಡಿರುವುದರಿಂದ ಮಕ್ಕಳಿಗೆ ಕಲಿಕೆಗೆ ಯಾವುದೇ ತೊಂದರೆ ಉಂಟಾಗಿಲ್ಲ. ಮಕ್ಕಳ ಬೆಳವಣಿಗೆಗೆ ಅಗತ್ಯವಾದ ಶಿಕ್ಷಣ ನೀಡುವಲ್ಲಿ ಶಿಕ್ಷಕರು ಒತ್ತು ನೀಡುತ್ತಿದ್ದಾರೆ. ಇದರಿಂದ ಯಾವುದೇ ವಿದ್ಯಾರ್ಥಿ ಮೇಲೆ ಒತ್ತಡ ಉಂಟಾಗುತ್ತಿಲ್ಲ ಎಂದು ಹೇಳಬಹುದಾಗಿದೆ.

– ಪ್ರ.ಸಂ.

# ಡಾ|| ವಿಷ್ಣುವರ್ಧನ್‌ರವರ 60ನೇ ಹುಟ್ಟು ಹಬ್ಬ




ಡಾ|| ವಿಷ್ಣುವರ್ಧನ್‌ರವರ 60ನೇ ಹುಟ್ಟು ಹಬ್ಬದ ಪ್ರಯುಕ್ತ ವಿಜಯಪುರದ ಬಾಲ ಕಾರ್ಮಿಕ ಶಾಲೆಯಲ್ಲಿ ಡಾ|| ವಿಷ್ಣುಸೇನಾ ಸಮಿತಿಯಿಂದ ಏರ್ಪಡಿಸಿದ್ದ ಸಮಾರಂಭದಲ್ಲಿ ಸಂಪಾದಕ ಜೆ. ಆರ್. ಮುನಿವೀರಣ್ಣನವರ 43ನೇ ಹುಟ್ಟು ಹಬ್ಬವನ್ನು ಸಹ ಆಚರಿಸಲಾಯಿತು. ಕಾರ್ಯನಿರತ ಪತ್ರಕರ್ತರ ಸಂಘದ ರಾಜ್ಯ ಉಪಾಧ್ಯಕ್ಷ ಮಂಡಿಬೆಲೆ ರಾಜಣ್ಣ, ಪುರಸಭಾ ಸದಸ್ಯ, ಎಲ್. ಚಂದ್ರಶೇಖರ್, ತಾಲ್ಲೂಕು ಭಾರತೀಯ ಸಾಮಾಜಿಕ ಪರಿವರ್ತನಾ ಚಳುವಳಿ ಸಮಿತಿಯ ಅಧ್ಯಕ್ಷ ಶಿವಣ್ಣ ಬಲಮುರಿ ಶ್ರೀನಿವಾಸ್, ಶಾಲಾ ಸಂಸ್ಥಾಪಕರಾದ ವಿ. ಎನ್. ರಮೇಶ್ ಹಾಗೂ ಜೆ.ಸಿ.ಐ. ಅಧ್ಯಕ್ಷ, ಎಂ. ಶಿವಕುಮಾರ್‌ರವರುಗಳು ಉಪಸ್ಥಿತರಿದ್ದರು.



ದೇವನಹಳ್ಳಿ ತಾಲ್ಲೂಕು ಭಾರತೀಯ ಸಾಮಾಜಿಕ ಪರಿವರ್ತನಾ ಚಳುವಳಿ ಸಮಿತಿಯನ್ನು ತಾ|| 4-10-09ರಂದು ದೇವನಹಳ್ಳಿಯಲ್ಲಿ ರಾಜ್ಯಾಧ್ಯಕ್ಷ ಆರ್. ಲೋಕೇಶ್ ಉದ್ಘಾಟಿಸಿದ ಸಂದರ್ಭದಲ್ಲಿ ತಾಲ್ಲೂಕು ಸಮಿತಿಯ ಅಧ್ಯಕ್ಷ ಬಿಡಗಾನಹಳ್ಳಿಯ ಶಿವಣ್ಣ, ವಿಜಯಪುರ ಟೌನಿನ ಗೌರವ ಅಧ್ಯಕ್ಷ ಎಲ್. ಚಂದ್ರಶೇಖರ್, ಟೌನ್‌ಅಧ್ಯಕ್ಷ ಎನ್. ಕನಕರಾಜು ಹಾಗೂ ಇತರೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಈ ಸಂಜೆ

ಸೋಮವಾರ
9 ನವೆಂಬರ್, 2009



ಹಲಸೂರು ರೇಡ್ ಕ್ರಾಸ್ ಹೋಂನಲ್ಲಿ ನಿಧನರಾದ ಏಕಲಾಂಗ ಯೋಧ ನರೇಂದ್ರ ಸಿಂಗ್ ಅವರ ಪಾರ್ಥಿವ ಶರೀರಕ್ಕೆ ರೇಡ್ ಕ್ರಾಸ್ ಉಪಾಧ್ಯಕ್ಷ ಡಾ.ಪೂಡೇ ಪಿ. ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ್, ವೈದ್ಯಕೀಯ ಅಧೀಕ್ಷಕ ಡಾ.ಎನ್.ಜಿ. ನಾರಾಯಣ ಅಂತಿಮ ನಮನ ಸಲ್ಲಿಸಿದರು.

**ಕನ್ನಡಪ್ರಭ, ಭಾನುವಾರ, 8 ನವೆಂಬರ್ 2009**

■ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರ: ನಾರಾಯಣ ಹೃದಲಾಯದ ತಜ್ಞ ವೈದ್ಯರಿಂದ ಶಿಬಿರ, ಉದ್ಘಾಟನೆ– ಶಾಸಕ ಡಾ.ಸಿ.ಎನ್.ಅಶ್ವತ್ಥ್‌ನಾರಾಯಣ, ಅಧ್ಯಕ್ಷತೆ– ಎನ್.ಆರ್.ಪಂಡಿತಾರಾಧ್ಯ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಸಭಾಂಗಣ, ಶೇಷಾದ್ರಿಪುರ ಸಂಜೆ ಪದವಿ ಕಾಲೇಜು, ಬೆಳಿಗ್ಗೆ 8.

**ಪ್ರಜಾವಾಣಿ**

**ಭಾನುವಾರ 8ನೇ ನವೆಂಬರ್ 2009**

**ಶೇಷಾದ್ರಿಪುರ ಸಂಜೆ ಪದವಿ ಕಾಲೇಜು**: ಶೇಷಾದ್ರಿಪುರ. ಕನ್ನಡ ರಾಜ್ಯೋತ್ಸವ ಪ್ರಯುಕ್ತ ಉಚಿತ ಹೃದಯ ಮತ್ತು ಕ್ಯಾನ್ಸರ್ ತಪಾಸಣಾ ಶಿಬಿರ.

ಉದ್ಘಾಟನೆ–ಶಾಸಕ ಡಾ.ಸಿ.ಎನ್. ಅಶ್ವತ್ಥ್ ನಾರಾಯಣ, ಅಧ್ಯಕ್ಷತೆ– ಶೇಷಾದ್ರಿಪುರ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಅತಿಥಿ– ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಾ.ವೂಡೇ.ಪಿ.ಕೃಷ್ಣ. ಬೆಳಿಗ್ಗೆ 8ರಿಂದ ಮಧ್ಯಾಹ್ನ 12.

ಸಂಯುಕ್ತ ಕರ್ನಾಟಕ । ಬೆಂಗಳೂರು । **4-11-2009**



ಬೆಂಗಳೂರಿನಲ್ಲಿ ಉದಯಭಾನು ಕಲಾಸಂಘದ ವತಿಯಿಂದ ಆಯೋಜಿಸಿದ್ದ ನೇತ್ರ ತಪಾಸಣಾ ಶಿಬಿರವನ್ನು ಸಿ.ಆರ್. ಚಂದ್ರಶೇಖರ್ ಉದ್ಘಾಟಿಸಿದರು. ಡಾ. ವೂಡೇ.ಪಿ.ಕೃಷ್ಣ, ಭಗವಾನ್ ಮಹಾವೀರ್ ಜೈನ್ ಆಸ್ಪತ್ರೆಯ ಡಾ. ನವೀನ್ ಹಾಗೂ ಸಂಘದ ಗೌರವ ಕಾರ್ಯದರ್ಶಿ ಎಂ. ನರಸಿಂಹ ಹಾಜರಿದ್ದರು.

ಈ ಸಂಜೆ
ಬುಧವಾರ, 04 ನವೆಂಬರ್, 2009

# ಸದೃಢ ಸಮಾಜಕ್ಕೆ ಪಣತೊಡಿ



ಬೆಂಗಳೂರು,ನ.4- ಇಂದಿನ ಯುವಕರು ಸದೃಢ ಸಮಾಜ ನಿರ್ಮಾಣ ಕಾರ್ಯದಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಳ್ಳಬೇಕು. ವಿದ್ಯಾವಂತ ಯುವ ಜನಾಂಗ ಸಮಾಜದ ಆರೋಗ್ಯ ಕಾಪಾಡುವ ನಿಟ್ಟಿನಲ್ಲಿ ಸಕ್ರಿಯ ಪಾತ್ರ ವಹಿಸಬೇಕು ಎಂದು ಡಾ.ವೂಡೇ ಪಿ.ಕೃಷ್ಣ ಕಿವಿ ಮಾತು ಹೇಳಿದರು.

ಅವರು ನಗರದ ಉದಯಭಾನು ಕಲಾಸಂಘವು ಕರ್ನಾಟಕ ರಾಜ್ಯೋತ್ಸವದ ಅಂಗವಾಗಿ ಆಯೋಜಿಸಿದ್ದ ಉಚಿತ ನೇತ್ರ ತಪಾಸಣಾ ಮತ್ತು ಕ್ಯಾಟರಾಕ್ಟ್ ಶಸ್ತ್ರ ಚಿಕಿತ್ಸೆ ಶಿಬಿರವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು.

ಶಿಬಿರದಲ್ಲಿ ಭಾಗವಹಿಸಿದ ನಿಮ್ಹಾನ್ಸ್‌ನ ನರರೋಗ ವಿಭಾಗ ಮುಖ್ಯಸ್ಥ ಡಾ.ಸಿ.ಆರ್.ಚಂದ್ರಶೇಖರ್ ಅವರು ಉಪನ್ಯಾಸ ನೀಡುತ್ತಾ ವಿದ್ಯಾರ್ಥಿಗಳ ಮಾನಸಿಕ ಸಾಮರ್ಥ್ಯ ಹಾಗೂ ಗ್ರಹಣ ಶಕ್ತಿ ಹೆಚ್ಚಿಸಲು ಮಾರ್ಗದರ್ಶಿ ಸೂತ್ರಗಳನ್ನು ತಿಳಿಸಿಕೊಟ್ಟರು. ಶಿಬಿರವನ್ನು ಭಗವಾನ್ ಮಹಾವೀರ್ ಜೈನ್ ಆಸ್ಪತ್ರೆ ಸಹಯೋಗದಲ್ಲಿ ನಡೆಸಲಾಯಿತು. ಶಿಬಿರದಲ್ಲಿ ಸುಮಾರು 270 ನಾಗರಿಕರು ಪ್ರಯೋಜನ ಪಡೆದರು. ವೈದ್ಯರ ಶಿಫಾರಸಿನ ಅನ್ವಯ 92 ಜನರಿಗೆ ಉಚಿತ ಕನ್ನಡಕ ಮತ್ತು 42 ಜನರಿಗೆ ಕಣ್ಣಿನ ಪೊರೆ ಶಸ್ತ್ರ ಚಿಕಿತ್ಸೆ ಮಾಡಲಾಯಿತು. ಸಮಾರಂಭದಲ್ಲಿ ಸಂಘದ ಆರೋಗ್ಯ ಉಪಸಮಿತಿ ಸಂಚಾಲಕ ಜಿ.ನಾಗರಾಜ್, ಗೌರವ ಕಾರ್ಯದರ್ಶಿ ಎಂ.ನರಸಿಂಹ, ಎಚ್.ಎಸ್.ಕಟಿನಯ್ಯ, ಸುಗುಣ ಅವರು ಪಾಲ್ಗೊಂಡಿದ್ದರು.

ವಾರ್ತಾಭಾರತಿ

ಬೆಂಗಳೂರು, ಬುಧವಾರ, ಅಕ್ಟೋಬರ್ 28, 2009



ಭಾರತೀಯ ಸ್ಟೇಟ್ ಬ್ಯಾಂಕ್‌ನ ಗುಮಾಸ್ತರ ಹುದ್ದೆಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗಾಗಿ ಕರ್ನಾಟಕ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ಏರ್ಪಡಿಸಿರುವ ಉಚಿತ ತರಬೇತಿ ಶಿಬಿರವನ್ನು ಮಂಗಳವಾರ ಶಾಸಕ ದಿನೇಶ್ ಗುಂಡೂರಾವ್ ಉದ್ಘಾಟಿಸಿದರು.ಶೇಷಾದ್ರಿ ಪುರಂ ಕಾಲೇಜಿನ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಒಕ್ಕೂಟದ ಅಧ್ಯಕ್ಷ ಕೆ.ಪ್ರಭಾಕರ ರೆಡ್ಡಿ ಭಾಗವಹಿಸಿದ್ದರು.

ಉದಯವಾಣಿ ಅಕ್ಟೋಬರ್ 27, 2009

# ಸಾಂಸ್ಕೃತಿಕ ಹಬ್ಬ ಉದ್ಘಾಟನೆ




ಶೇಷಾದ್ರಿಪುರಂ ಕಾಲೇಜು ಏರ್ಪಡಿಸಿದ್ದ ತರಂಗ್ 2009 ಅಂತರ್‌ಕಾಲೇಜು ಸಾಂಸ್ಕೃತಿಕ ಹಬ್ಬವನ್ನು ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಟಿ.ಎಸ್. ನಾಗಾಭರಣ ಉದ್ಘಾಟಿಸಿದರು. ಎನ್.ಆರ್. ಪಂಡಿತಾರಾಧ್ಯ, ಡಾ. ವೂಡೇ ಪಿ.ಕೃಷ್ಣ, ನರಹಳ್ಳಿ ಬಾಲಸುಬ್ರಹ್ಮಣ್ಯ, ಪ್ರೊ.ಪಿ.ವಿ. ಸರಸ್ವತಿ ಉಪಸ್ಥಿತರಿದ್ದರು.

ಸಂಜೆವಾಣಿ

ಭಾನುವಾರ 25 ಅಕ್ಟೋಬರ್ 2009





ನಗರದ ಶೇಷಾದ್ರಿಪುರಂ ಕಾಲೇಜು ಹಮ್ಮಿಕೊಂಡಿದ್ದ ತರಂಗ್-2009 ಎಂಬ ಅಂತರಕಾಲೇಜು ಸಾಂಸ್ಕೃತಿಕ ಹಬ್ಬವನ್ನು ಚಿತ್ರ ನಿರ್ದೇಶಕ ಟಿ.ಎಸ್. ನಾಗಾಭರಣ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಸರೋಜಾ ಕೆ.ಎಂ. ನಂಜಪ್ಪ ಇದ್ದಾರೆ.

ಇಂದು ಸಂಜೆ — ಭಾನುವಾರ, ಅ.25, 2009




ಶೇಷಾದ್ರಿ ಪುರಂ ಕಾಲೇಜು ಏರ್ಪಡಿಸಿದ್ದ ತರಂಗ್–2009 ಅಂತರ ಕಾಲೇಜು ಸಾಂಸ್ಕೃತಿಕ ಹಬ್ಬವನ್ನು ಚಲನಚಿತ್ರ ನಿರ್ದೇಶಕ ಟಿ. ಎಸ್. ನಾಗಾಭರಣ ಉದ್ಘಾಟಿಸಿದರು. ಶೇಷಾದ್ರಿ ಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ. ವೊಡೇ ಪಿ. ಕೃಷ್ಣ, ಸಹಾಯಕ ಕಾರ್ಯದರ್ಶಿ ಸರೋಜಾ ಕೆ. ಎಂ. ನಂಜಪ್ಪ, ಆಡಳಿತ ಸಲಹಾ ಪರಿಷತ್ತಿನ ಅಧ್ಯಕ್ಷ ಎಂ. ಎಸ್. ನಟರಾಜ್ ಸೇರಿದಂತೆ ಇತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಶನಿವಾರ, 24 ಅಕ್ಟೋಬರ್ 2009

## ಸಾಂಸ್ಕೃತಿಕ ಹಬ್ಬ

ಶೇಷಾದ್ರಿಪುರ ಕಾಲೇಜು ಏರ್ಪಡಿಸಿದ್ದ ಸಾಂಸ್ಕೃತಿಕ ಹಬ್ಬವನ್ನು ಟಿ.ಎಸ್.ನಾಗಾಭರಣ ಉದ್ಘಾಟಿಸಿದರು. ಎನ್.ಆರ್.ಪಂಡಿತಾರಾಧ್ಯ, ವೂಡೇ ಕೃಷ್ಣ, ಸರೋಜಾ, ಕೆ.ಎಂ.ನಂಜಪ್ಪ, ಎಂ.ಎಸ್.ನಟರಾಜ್, ನರಹಳ್ಳಿ ಬಾಲಸುಬ್ರಹ್ಮಣ್ಯ ಇದ್ದರು.



ಸಂಯುಕ್ತ ಕರ್ನಾಟಕ । ಬೆಂಗಳೂರು । 22-10-2009




ಶೇಷಾದ್ರಿಪುರಂ ವಾಣಿಜ್ಯ ಕಾಲೇಜಿನ ಯೂಥ್‌ರೆಡ್ ಕ್ರಾಸ್ ಘಟಕದ ಉದ್ಘಾಟನಾ ಸಮಾರಂಭದಲ್ಲಿ ರೆಡ್‌ಕ್ರಾಸ್ ಕರ್ನಾಟಕ ಶಾಖೆ ಉಪಾಧ್ಯಕ್ಷ ಹಾಗೂ ಕಾಲೇಜಿನ ಕಾರ್ಯದರ್ಶಿಯಾದ ಡಾ.ವೂಡೇ ಪಿ. ಕೃಷ್ಣ, ಬೆಂಗಳೂರು ಮೆಗಾಸಿಟಿ ಲಯನ್ಸ್ ಕ್ಲಬ್ ನ ಅಧ್ಯಕ್ಷ ಪಿ.ಬಿ.ಹೆಗಡೆ, ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಜಯಶ್ರೀ ಜೆ.ಸಿಂಗ್,ರೆಡ್‌ಕ್ರಾಸ್‌ನ ಗೌ.ಖಜಾಂಚಿ ರಾಜು ಚಂದ್ರಶೇಖರ್ ಮತ್ತಿತರರು ಉಪಸ್ಥಿತರಿದ್ದರು.

ಈ ಸಂಜೆ

ಮಂಗಳವಾರ, 27 ಅಕ್ಟೋಬರ್, 2009




ಶೇಷಾದ್ರಿಪುರಂ ಕಾಲೇಜು ಏರ್ಪಡಿಸಿದ್ದ ತರಂಗ್-2009 ಅಂತರ ಕಾಲೇಜು ಸಾಂಸ್ಕೃತಿಕ ಹಬ್ಬವನ್ನು ನಿರ್ದೇಶಕ ಟಿ.ಎಸ್. ನಾಗಾಭರಣ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ವೂಡೆ ಪಿ.ಕೃಷ್ಣ, ಸ. ಕಾರ್ಯದರ್ಶಿ ಸರೋಜಾ ಕೆ.ಎಂ.ನಂಜಪ್ಪ, ಎಂ.ಎಸ್.ನಟರಾಜ್, ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ, ಎಚ್.ದೇವಕುಮಾರ್, ಪ್ರೊ.ಪಿ.ವಿ.ಸರಸ್ವತಿ ಮತ್ತಿತರರು ಉಪಸ್ಥಿತರಿದ್ದರು.

## ಹುಯಿಲಗೋಳ ನಾರಾಯಣರಾಯರ ಜಯಂತ್ಯುತ್ಸವ

# ಗೀತಗಾಯನದ ಮೆರುಗು

'ಯಾವಲ್ಲಿ ಅಡಗಿರುವಿ ಕೃಷ್ಣಯ್ಯ ನೀ...' ಗೀತೆಯನ್ನು ವಾರಿಣಿ ಮತ್ತು ಶ್ರೀದೇವಿ ಹಾಡಿದರು. ಗಾಯಕ ನರಹರಿ ದೀಕ್ಷಿತ್ ನಿರ್ದೇಶನದಲ್ಲಿ ಮೂಡಿಬಂದ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಗೀತೆಯನ್ನು ಸೃಜನ ಸಂಗೀತ ಶಾಲೆಯ 30 ವಿದ್ಯಾರ್ಥಿಗಳು ಸಾಮೂಹಿಕವಾಗಿ ಹಾಡಿದ ಗೀತೆಗೆ, ನಾಟ್ಯ ಕಲಾವಿದೆ ಕಾವ್ಯಾ ಜಿ. ರಾವ್ ಅವರ ನೃತ್ಯ ಪ್ರೇಕ್ಷಕರನ್ನು ಮನರಂಜಿಸಿತು.

ಹಂಸಜ್ಯೋತಿ ಸಂಸ್ಥೆಯು ಕವಿ ಹುಯಿಲಗೋಳ ನಾರಾಯಣರಾಯರ 125ನೇ ಜಯಂತ್ಯುತ್ಸವ ಹಾಗೂ ಗೀತಗಾಯನ ಕಾರ್ಯಕ್ರಮದ ಅಂಗವಾಗಿ ಶೇಷಾದ್ರಿಪುರ ಕಾಲೇಜು ಆವರಣದಲ್ಲಿ ಏರ್ಪಡಿಸಿದ್ದ ಸಂಗೀತ ಸಮಾರಂಭಕ್ಕೆ ಮೆರುಗು ನೀಡಿತು.

ಬೆಂಗಳೂರು ದೂರದರ್ಶನ ಕೇಂದ್ರದ ಮಾಜಿ ನಿರ್ದೇಶಕ ಜಿ.ಎಂ. ಶಿರಹಟ್ಟಿ ಕಾರ್ಯಕ್ರಮ ಉದ್ಘಾಟಿಸಿ, 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು ಗೀತೆಗೆ ಸರಿಯಾದ ಪ್ರಮುಖ್ಯ ಸಿಗಲಿಲ್ಲ. ಈ ಕವಿಗೆ ನಾಡಿನ ಮಾನ್ಯತೆ ದೊರೆಯಬೇಕು' ಎಂದು ಅಭಿಪ್ರಾಯಪಟ್ಟರು.

ಶಿಕ್ಷಣ ತಜ್ಞ ಗುರುರಾಜ ಕರ್ಜಗಿ ಮಾತನಾಡಿ, ಶಿಕ್ಷಕರಾದವರು ತಾವು ನಡೆದುಬಂದ ಹಾದಿಯನ್ನು ದಾಖಲಿಸುವುದನ್ನು ಮರೆತಿದ್ದಾರೆ. ಅವರ ಅನುಭವ ದಾಖಲಿಸಿದರೆ ಮುಂದಿನ ಪೀಳಿಗೆಗೆ ಅನುಕೂಲವಾಗಲಿದೆ ಎಂದು ಹೇಳಿದರು.

ಚಲನಚಿತ್ರ ಸಾಹಿತಿ ಡಾ. ವಿ. ನಾಗೇಂದ್ರ ಪ್ರಸಾದ್, ಹುಯಿಲಗೋಳ ನಾರಾಯಣ ರಾಯರು ಸ್ವಾತಂತ್ರ್ಯ ಪೂರ್ವದ ಸಾಂಸ್ಕೃತಿಕ ರಾಯಭಾರಿ ಎಂದು ಉದ್ಗರಿಸಿದರು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಉದ್ಯಮಿ ಅನಿಲ್ ಶ್ರೀನಿವಾಸ್, ಹಂಸಜ್ಯೋತಿಯ ಸಿ.ಎಂ. ವೆಂಕಟೇಶ್, ಉಭಯಗಾನ ವಿದುಷಿ ಶ್ಯಾಮಲಾ



ಹಂಸಜ್ಯೋತಿ ಸಂಸ್ಥೆ ಆಯೋಜಿಸಿದ್ದ ಹುಯಿಲಗೋಳ ನಾರಾಯಣರಾಯರ 125ನೇ ಜಯಂತ್ಯುತ್ಸವ ಉದ್ಘಾಟನಾ ಸಮಾರಂಭದಲ್ಲಿ ದೂರದರ್ಶನ ನಿವೃತ್ತ ನಿರ್ದೇಶಕ ಜಿ.ಎಂ. ಶಿರಹಟ್ಟಿ, ಮು. ಮುರಳೀಧರ, ಡಾ. ವಿ. ನಾಗೇಂದ್ರ ಪ್ರಸಾದ್, ಗೌರೀಶ್ ಎಸ್. ಅಕ್ಕಿ, ವೂಡೇ ಪಿ. ಕೃಷ್ಣ, ಅನಿಲ್ ಶ್ರೀನಿವಾಸ್, ಸಿ.ಎಂ. ವೆಂಕಟೇಶ್, ರಾಧಾ ಕುಲಕರ್ಣಿ, ಗುರುರಾಜ ಕರ್ಜಗಿ ಹಾಗೂ ಗಂಗನಶ್ರೀ ಉಪಸ್ಥಿತರಿದ್ದರು.

ಜಿ. ಭಾವೆ ಹಾಗೂ ಹುಯಿಲಗೋಳ ನಾರಾಯಣರಾಯರ ಮೊಮ್ಮಗಳು ರಾಧಾ ಕುಲಕರ್ಣಿ ಅವರು ಸಾಹಿತ್ಯ ಕೃಷಿಯನ್ನು ಪ್ರಶಂಸಿದರು.

ಮೂರು ಹಂತಗಳಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಎರಡನೇ ಹಂತದಲ್ಲಿ ಹುಯಿಲಗೋಳ ನಾರಾಯಣರಾಯರ ಮೊಮ್ಮಗಳು ರಾಧಾ ಕುಲಕರ್ಣಿ ರಚಿಸಿದ 'ಪಾತ್ ವೇವ್ಡ್ ಆಸ್ ಎ ಟೀಚರ್' ಪುಸ್ತಕ ಬಿಡುಗಡೆ ಮಾಡಲಾಯಿತು.

ಕವಿ ಹುಯಿಲಗೋಳ ನಾರಾಯಣರಾಯರು ರಚಿಸಿದ ಗೀತೆಗಳನ್ನು ನೆರೆದ ಅಭಿಮಾನಿಗಳಿಗೆ ಪ್ರಸ್ತುತಪಡಿಸಲಾಯಿತು. ಮೊದಲಿಗೆ ಗಾಯಕಿ ಮಾಲಿನಿ ಕೇಶವಪ್ರಸಾದ್ ಅವರು 'ನನ್ನದೇನಿದೆಯೋ ದೇವ, ನಿನ್ನದೇ ಎಲ್ಲವೂ', 'ರಘುಪತಿಯೇ ನಿನ್ನನೆ ಪೊಗಳುವಾ ಪದಗಳನು' ಹಾಗೂ 'ಕಂಡಿರೇನಯ್ಯ ಹರಿಯನು' ಗೀತೆಗಳಿಗೆ ತಾವೇ ಸ್ವತಃ ರಾಗ ಸಂಯೋಜಿಸಿ ಹಾಡುವುದರ ಮೂಲಕ ಗೀತ ಗಾಯನಕ್ಕೆ ಚಾಲನೆ ನೀಡಿದರು.

ನಂತರ ಹೆಸರಾಂತ ಗಾಯಕ ಶಂಕರ್ ಶ್ಯಾನ್‌ಭೋಗ್ ಅವರು 'ಏನು ಮಾಡಿದೆ ಮೂಢ ಮನುಜ', 'ಕಮಲ ಭವನ ಪ್ರಿಯ ರಾಣಿ', 'ಪರಮ ಮಂಗಳ ಧಾಮ' ಗೀತೆಗಳಿಗೆ ಸ್ವತಃ ರಾಗ ಸಂಯೋಜನೆ ಮಾಡಿ ಹಾಡುವುದರ ಮೂಲಕ ನೆರೆದ ಪ್ರೇಕ್ಷಕರ ಮನಸೂರೆಗೊಂಡರು.

ಗಾಯಕ ರವೀಂದ್ರ ಸೊರಗಾಂವಿಯವರು 'ಎಂಥ ಧನ್ಯಳೇ ಯಶೋಧೆ', 'ಮದಾಂಧನೋ ನಾನು ಮಧುಸೂದನ' ಹಾಗೂ 'ನಿಜ ವೈಷ್ಣವ ಅವನೇ ನಿಜ ವೈಷ್ಣವ', ಗೀತೆಗಳಿಗೆ ತಾವೇ ರಾಗ ಸಂಯೋಜಿಸಿ ತಮ್ಮ ಅಮೋಘ ಕಂಠಸಿರಿಯಿಂದ ಪ್ರೇಕ್ಷಕರನ್ನು ರಂಜಿಸಿದರು.

ಗಾಯಕಿ ಅನುಪಮಾ ಆರ್. ರಾವ್ ಅವರು ಶಂಕರ್ ಶ್ಯಾನುಭೋಗ್ ಅವರು ರಾಗ ಸಂಯೋಜಿಸಿದ 'ಪ್ರಾಣ ದೇವಕಾವುದಮ್ಮ', 'ನೀ ನೊಲಿದರೇನು ಏನಿಲ್ಲ ಹರಿ', 'ಸಿಕ್ಕ ಸಿಕ್ಕ ಇಲ್ಲೇ ಸಿಕ್ಕ' ಗೀತೆಗಳನ್ನು ಹಾಡಿದರು.

ವೆಂಕಟೇಶ್ ಹಾಲ್ಯಾಡು-ಹಾರ್ಮೋನಿಯಂ, ಹನುಮಂತ ಕಾರಟಗಿ-ತಬಲ, ಹರೀಶ್-ಮ್ಯಾಂಡೊಲಿನ್, ಕೃಷ್ಣ-ರಿದಂಪ್ಯಾಡ್, ಎಸ್.ವಿ. ಭಾಸ್ಕರ್-ಕೊಳಲು ಹಾಗೂ ಲಕ್ಷ್ಮೀಪತಿ-ಡೋಲಕ್ ವಾದ್ಯ ಸಹಕಾರ ನೀಡಿದರು. ಗಾಯಕ ವಿಜಯ ಹಾವನೂರು ಕಾರ್ಯಕ್ರಮ ನಡೆಸಿಕೊಟ್ಟರು.




ರವೀಂದ್ರ ಸೊರಗಾಂವಿ, ಅನುಪಮಾ ಆರ್. ರಾವ್, ಶಂಕರ್ ಶ್ಯಾನುಭೋಗ್, ಮಾಲಿನಿ ಕೇಶವಪ್ರಸಾದ್ ಹಾಗೂ ವಿಜಯ ಹಾವನೂರು ಅವರಿಂದ ಗಾಯನ.

ಸಂಯುಕ್ತ ಕರ್ನಾಟಕ । ಬೆಂಗಳೂರು । 20-10-2009




ದೇವರಾಜ್ ಅರಸು ವಿಶ್ವವಿದ್ಯಾಲಯ ಕುಲಪತಿ ಡಾ.ಎಸ್. ಚಂದ್ರಶೇಖರ್ ಶೆಟ್ಟಿ ಉತ್ತರ ಕರ್ನಾಟಕ ನೆರೆಸಂತ್ರಸ್ತರಿಗೆ ರೆಡ್‌ಕ್ರಾಸ್ ಪರಿಹಾರ ಸಾಮಗ್ರಿ ರವಾನೆಗೆ ಚಾಲನೆ ನೀಡಿದ ಸಂದರ್ಭದಲ್ಲಿ ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಪರಿಸರವಾದಿ ಸುರೇಶ್ ಹೆಬ್ಳೀಕರ್ ಹಾಗೂ ರೆಡ್‌ಕ್ರಾಸ್ ನ ಕಾರ್ಯಕರ್ತರು ಉಪಸ್ಥಿತರಿದ್ದರು.

# ಹೊಸ ದಿಗಂತ

ಮಂಗಳವಾರ,20 ಅಕ್ಟೋಬರ್ 2009




## ■ ರೆಡ್‌ಕ್ರಾಸ್ ಪರಿಹಾರ

ರೆಡ್‌ಕ್ರಾಸ್ ಸಂಸ್ಥೆ ಉ.ಕರ್ನಾಟಕದ ನೆರೆ ಪೀಡಿತ ಪ್ರದೇಶಗಳಿಗೆ ಪರಿಹಾರ ಸಾಮಗ್ರಿ ಕಳುಹಿಸಿಕೊಟ್ಟಿತು. ದೇವರಾಜ್ ಅರಸು ವಿಶ್ವವಿದ್ಯಾಲಯದ ಕುಲಪತಿ ಡಾ. ಎಸ್. ಚಂದ್ರಶೇಖರ್ ಶೆಟ್ಟಿ ಅವರು ಪರಿಹಾರ ಸಾಮಗ್ರಿಗಳ ರವಾನೆಗೆ ಚಾಲನೆ ನೀಡಿದರು. ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಕನ್ನಡಪ್ರಭ, ಮಂಗಳವಾರ, 20 ಅಕ್ಟೋಬರ್ 2009



## ಸಾಮಗ್ರಿ ರವಾನೆ

ನೆರೆ ಸಂತ್ರಸ್ತರಿಗೆ ರೆಡ್‌ಕ್ರಾಸ್ ಸಂಸ್ಥೆ ಕೊಂಡೊಯ್ಯುತ್ತಿರುವ ಪರಿಹಾರ ಸಾಮಗ್ರಿಗಳ ರವಾನೆಗೆ ಡಾ। ಎಸ್.ಚಂದ್ರಶೇಖರ್ ಶೆಟ್ಟಿ ಚಾಲನೆ ನೀಡಿದರು. ಡಾ। ವೂಡೇ ಪಿ.ಕೃಷ್ಣ, ಸುರೇಶ್ ಹೆಬ್ಳೀಕರ್, ರಾಜು ಚಂದ್ರಶೇಖರ್, ಡಾ। ಎನ್.ಜೆ.ನಾರಾಯಣ, ಬ್ಲಡ್ ಕುಮಾರ್ ಉಪಸ್ಥಿತರಿದ್ದರು.

ಈ ಸಂಜೆ

ಸೋಮವಾರ, 19 ಅಕ್ಟೋಬರ್, 2009




ರೆಡ್ ಕ್ರಾಸ್‌ನಿಂದ ನೆರೆ ಸಂತ್ರಸ್ತರಿಗೆ ರವಾನಿಸಿದ ಸಾಮಗ್ರಿಗಳ ವಾಹನಕ್ಕೆ ದೇವರಾಜು ಅರಸು ವಿವಿ ಕುಲಪತಿ ಡಾ. ಎಸ್.ಚಂದ್ರಶೇಖರ ಶೆಟ್ಟಿ ಚಾಲನೆ ನೀಡಿದರು. ಉಪಾಧ್ಯಕ್ಷ ಡಾ. ವೂಡೆ. ಪಿ. ಕೃಷ್ಣ ಸುರೇಶ್ ಹೆಬ್ಳೀಕರ್, ರಾಜು ಚಂದ್ರಶೇಖರ್, ಡಾ. ಎನ್.ಜಿ. ನಾರಾಯಣ ಹಾಜರಿದ್ದರು.

ದಿ ಟೈಮ್ಸ್ ಆಫ್ ಇಂಡಿಯಾ, ಬೆಂಗಳೂರು
ಸೋಮವಾರ, ಅಕ್ಟೋಬರ್ 19, 2009



ರೆಡ್‌ಕ್ರಾಸ್ ಸಂಸ್ಥೆ ನೆರೆಸಂತ್ರಸ್ತರಿಗೆ ರವಾನಿಸಿದ ಪರಿಹಾರ ಸಾಮಗ್ರಿಗಳ ಟ್ರಕ್‌ಗೆ ದೇವರಾಜ್ ಅರಸು ಡೀಮ್ಡ್ ವಿಶ್ವವಿದ್ಯಾಲಯ ಕುಲಪತಿ ಡಾ. ಎಸ್. ಚಂದ್ರಶೇಖರ್ ಶೆಟ್ಟಿ ಚಾಲನೆ ನೀಡಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಗೌರವ ಕಾರ್ಯದರ್ಶಿ ರಾಜು ಚಂದ್ರಶೇಖರ್, ಪರಿಸರವಾದಿ ಸುರೇಶ್ ಹೆಬ್ಳೀಕರ್, ಮತ್ತು ರೆಡ್‌ಕ್ರಾಸ್ ಕಾರ್ಯಕರ್ತರು ಉಪಸ್ಥಿತರಿದ್ದರು.

ಪ್ರಜಾವಾಣಿ

ಭಾನುವಾರ 18 ಅಕ್ಟೋಬರ್ 2009



ಉತ್ತರ ಕರ್ನಾಟಕ ನೆರೆ ಸಂತ್ರಸ್ತರಿಗೆ ರೆಡ್‌ಕ್ರಾಸ್ ಪರಿಹಾರ ಸಾಮಗ್ರಿಗಳ ರವಾನೆಗೆ ದೇವರಾಜ್ ಅರಸು ವಿವಿ ಕುಲಪತಿ ಡಾ. ಎಸ್. ಚಂದ್ರಶೇಖರ ಶೆಟ್ಟಿ ಚಾಲನೆ ನೀಡಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಸುರೇಶ ಹೆಬ್ಬೀಕರ್, ರಾಜು ಚಂದ್ರಶೇಖರ ಸೇರಿದಂತೆ ಇತರರಿದ್ದರು.

## ಸಂಯುಕ್ತ ಕರ್ನಾಟಕ । ಬೆಂಗಳೂರು । 16-10-2009




ಬೆಂಗಳೂರಿನ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಏರ್ಪಡಿಸಿದ್ದ ರಕ್ತ ದಾನ ಶಿಬಿರವನ್ನು ಮೂಳೆ ತಜ್ಞ ಡಾ. ಶರಣ್ ಎಸ್. ಪಾಟಿಲ್ ಉದ್ಘಾಟಿಸಿದರು. ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ಡಾ. ವೂಡೇ ಪಿ ಕೃಷ್ಣ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತ್‌ರಾಧ್ಯ, ಜಂಟಿ ಕಾರ್ಯದರ್ಶಿ ಎ. ಆರ್. ಶ್ರೀನಿವಾಸಯ್ಯ, ಮತ್ತಿತರು ಉಪಸ್ಥಿತರಿದ್ದರು.



ನಗರದ ಶೇಷಾದ್ರಿಪುರಂ ಆವರಣದಲ್ಲಿ ಇಕೊ ಕ್ಲಬ್ ಏರ್ಪಡಿಸಿರುವ ಖಾದಿ ಉತ್ಪನ್ನಗಳ ಪ್ರದರ್ಶನ ಹಾಗೂ ಮಾರಾಟ ಮೇಳವನ್ನು ಹಿರಿಯ ಗಾಂಧಿವಾದಿ [illegible] ಶ್ರೀನಿವಾಸಯ್ಯ ಉದ್ಘಾಟಿಸಿ, ನಂತರ ಮಾದಕ ದ್ರವ್ಯ ಸೇವನೆ ಕುರಿತ ಜಾಗೃತಿ ಜಾಥಾದಲ್ಲಿ ವಿದ್ಯಾರ್ಥಿಗಳಿಗೆ ವಿವರ ನೀಡಿದರು. ಈ ಸಂದರ್ಭದಲ್ಲಿ ಪ್ರೊಡೆ ಪಿ.ಕೃಷ್ಣ ಪ್ರಾಂಶುಪಾಲ ಶ್ರೀನಿವಾಸ್ ಮತ್ತಿತರರಿದ್ದರು.



ನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ ಖ್ಯಾತ ಮೂಳೆ ತಜ್ಞ ಡಾ.ಶರಣ್ ಎಸ್. ಪಾಟೀಲ್, ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಗೌರವಕೋಶಾಧ್ಯಕ್ಷ ರಾಜುಚಂದ್ರಶೇಖರ್, ಪ್ರಾಂಶುಪಾಲ ಡಾ.ಎಂ. ಪ್ರಕಾಶ್, ಶಿಕ್ಷಣ ಸಂಸ್ಥೆ ಅಧ್ಯಕ್ಷ ಪಂಡಿತಾರಾಧ್ಯ, ಶ್ರೀನಿವಾಸಯ್ಯ ಮತ್ತಿತರರು ಪಾಲ್ಗೊಂಡಿದ್ದರು.

ಪ್ರಜಾವಾಣಿ ಸೋಮವಾರ 12ನೇ ಅಕ್ಟೋಬರ್ 2009

# ಏಡ್ಸ್ ತಡೆ ಬಗ್ಗೆ ಜಾಗೃತಿ: ವಿದ್ಯಾರ್ಥಿಗಳಿಂದ ಸೈಕಲ್ ರ್‍ಯಾಲಿ

ಬೆಂಗಳೂರು: ‘ಏಡ್ಸ್ ತಡೆಗಟ್ಟುವಿಕೆ ಮತ್ತು ಪರಿಸರ ಸಂರಕ್ಷಣೆ’ ಕುರಿತು ಅರಿವು ಮೂಡಿಸಲು ಶೇಷಾದ್ರಿಪುರ ಪದವಿ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ (ಎನ್‌ಎಸ್‌ಎಸ್) ಘಟಕದ ಹದಿನೈದು ವಿದ್ಯಾರ್ಥಿಗಳು ಕೈಗೊಂಡಿರುವ ಸೈಕಲ್ ರ್‍ಯಾಲಿಗೆ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಡಾ.ವೂಡೇ ಪಿ. ಕೃಷ್ಣ ಹಾಗೂ ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಾಂಶುಪಾಲ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಇತ್ತೀಚೆಗೆ ಚಾಲನೆ ನೀಡಿದರು.

ರ್‍ಯಾಲಿಯನ್ನು ಉದ್ದೇಶಿಸಿ ಮಾತನಾಡಿದ ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ‘ನಮ್ಮ ಇಂದಿನ ವಿದ್ಯಾರ್ಥಿಗಳಲ್ಲಿ ಶೈಕ್ಷಣಿಕ ತಿಳಿವಳಿಕೆಯನ್ನು ಮೂಡಿಸುವುದಷ್ಟಕ್ಕೇ ಶಿಕ್ಷಣ ಸೀಮಿತವಾಗಬೇಕಾಗಿಲ್ಲ; ಸಾಮಾಜಿಕ ಕಾಳಜಿಯನ್ನು ವ್ಯಕ್ತಪಡಿಸುವುದನ್ನೂ ಶಿಕ್ಷಣ ಕಲಿಸಿಕೊಡಬೇಕಾಗಿದೆ’ ಎಂದರು.

‘ಗ್ರಾಮೀಣ ಜನರೊಂದಿಗೆ ನಗರದ ವಿದ್ಯಾರ್ಥಿಗಳು ಬೆರೆತು ಅವರಲ್ಲಿ ಅರಿವು ಮೂಡಿಸುವ ಕೆಲಸ ನಿರಂತರವಾಗಿ ನಡೆಯಬೇಕಾಗಿದೆ. ಯುವ ಜನಾಂಗ ಹೀಗೆ ಸಾಮಾಜಿಕ ಜಾಗೃತಿ ಉಂಟು ಮಾಡುವ ಕೆಲಸದಲ್ಲಿ ತೊಡಗುತ್ತಿರುವುದು ನಿಜಕ್ಕೂ ಸಂತೋಷಕರ’ ಎಂದು ಅವರು ಹೇಳಿದರು.

ನಂತರ ಮಾತನಾಡಿದ ಕಾಲೇಜಿನ ಎನ್.ಎಸ್.ಎಸ್. ಅಧಿಕಾರಿ ಪ್ರತಾಪ್ ಲಿಂಗಯ್ಯ, ‘ಬೆಂಗಳೂರಿನಿಂದ ಮೈಸೂರಿಗೆ ಹೋಗುವ ಮಾರ್ಗದಲ್ಲಿ ಸಿಗುವ ಹಳ್ಳಿಗಳಲ್ಲಿ ಏಡ್ಸ್ ತೀವ್ರವಾಗಿದೆ. ಇದಕ್ಕೆ ಅವರಲ್ಲಿನ ಮಾಹಿತಿ ಕೊರತೆಯೇ ಕಾರಣ. ಈ ಕೊರತೆಯನ್ನು ನೀಗಲು ನಾವು ಈ ಸೈಕಲ್ ರ್‍ಯಾಲಿಯನ್ನು ಆಯೋಜಿಸಿದ್ದೇವೆ’ ಎಂದರು.



‘ಏಡ್ಸ್ ತಡೆಗಟ್ಟುವಿಕೆ ಮತ್ತು ಪರಿಸರ ಸಂರಕ್ಷಣೆ’ ಕುರಿತು ಅರಿವು ಮೂಡಿಸಲು ಶೇಷಾದ್ರಿಪುರ ಪದವಿ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆ (ಎನ್‌ಎಸ್‌ಎಸ್) ಘಟಕದ ವಿದ್ಯಾರ್ಥಿಗಳು ಇತ್ತೀಚೆಗೆ ಸೈಕಲ್ ರ್‍ಯಾಲಿ ಕೈಗೊಂಡಿದ್ದರು.

ಸಂಯುಕ್ತ ಕರ್ನಾಟಕ

ಬೆಂಗಳೂರು । 10-10-2009



# ರೆಡ್‌ಕ್ರಾಸ್ ಜೊತೆ ಸಂಘ ಸಂಸ್ಥೆಗಳು

ಬೆಂಗಳೂರು, ಅ. 09: ಪ್ರವಾಹ ಪ್ರದೇಶದ ಸಂತ್ರಸ್ತರಿಗೆ ನೆರವು ನೀಡಲು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯೊಂದಿಗೆ ಎಲ್ಲಾ ಕ್ಷೇತ್ರಗಳ ಹತ್ತಾರು ಸಂಘ-ಸಂಸ್ಥೆಗಳು ಕೈಜೋಡಿಸಿವೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯ ನೋಡಲ್ ಏಜನ್ಸಿಯ ರೀತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಸಂಸ್ಥೆಗೆ ದಾನಿಗಳು ನೀಡುವ ದೇಣಿಗೆಯು ಸೆಕ್ಷನ್ 80 ಜಿ, ಆದಾಯ ತೆರಿಗೆ ಕಾಯ್ದೆ 1961ರ ಅಡಿಯಲ್ಲಿ ವಿನಾಯಿತಿಗೊಳಪಟ್ಟಿದೆ. ಕೆನಡಿಯನ್ ರೆಡ್‌ಕ್ರಾಸ್ ಸಂಸ್ಥೆಯು ನೆರೆ ಪ್ರದೇಶದ ಜನರಿಗೆ ಸಹಾಯ ನೀಡಲು ಮುಂದೆ ಬಂದು ದೆಹಲಿಗೆ ಬಂದು ಇಳಿದಿದೆ.

ಪ್ರವಾಹ ಪ್ರದೇಶಗಳ ವೀಕ್ಷಣೆಯ ನಂತರ ಪರಿಹಾರ ನೀಡಲಿದೆ ಎಂದು ಭಾರತ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೆ ಪಿ ಕೃಷ್ಣ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ರೆಡ್‌ಕ್ರಾಸ್ ಸಂಸ್ಥೆ ತಕ್ಷಣ ಪರಿಹಾರಕ್ಕಾಗಿ 6 ಕಮಿಟಿಗಳನ್ನು ರಚಿಸಿ, ಶಾಲೆಯಿಂದ ವಂಚಿತರಾದ ವಿದ್ಯಾರ್ಥಿಗಳಿಗಾಗಿ ಶೈಕ್ಷಣಿಕ ಪ್ರತಿಷ್ಠಾನಗಳನ್ನು ಸಂಪರ್ಕಿಸಿ ಪುನರ್ ಶಿಕ್ಷಣವನ್ನು ಕೊಡಿಸುವ ವ್ಯವಸ್ಥೆ ಮಾಡಲಾಗಿದೆ ಎಂದು ಹೇಳಿದರು.

ಕ್ರಿಕೆಟ್‌ಪಟು ಅನಿಲ್ ಕುಂಬ್ಳೆ ಮಾತನಾಡಿ ಈಗ ನಡೆಯುತ್ತಿರುವ ಐಪಿಎಲ್ ಟೂರ್ನಮೆಂಟ್‌ನಲ್ಲಿ ಡೆಕ್ಕನ್ ಚಾಲೆಂಜರ್ಸ್ ಮತ್ತು ರಾಯಲ್ ಚಾಲೆಂಜರ್ಸ್ ಪಂದ್ಯದಿಂದ ಬಂದ ಹಣವನ್ನು ಎರಡೂ ತಂಡಗಳು ನೀಡುವಂತೆ ಮತ್ತು ಕ್ರಿಕೆಟ್ ಮತ್ತು ನಟರು ಸೇರಿ ಕ್ರಿಕೆಟ್ ಆಡಿ ಬಂದಂತಹ ಹಣವನ್ನು ನೆರೆ ಪರಿಹಾರಕ್ಕೆ ನೀಡಲು ಮನವಿ ಮಾಡುವುದಾಗಿ ತಿಳಿಸಿದರು.

ಸಾಹಿತ್ಯ ರಚನೆಕಾರ ಜಯಂತ್ ಕಾಯ್ಕಿಣಿ ಮಾತನಾಡಿ ಮೊದಲೇ ದೊಡ್ಡ ಗಾಯವಾಗಿದ್ದ ಉತ್ತರ ಕರ್ನಾಟಕದ ಮೇಲೆ ಪ್ರವಾಹ ಬಂದೊದಗಿ ಬರೆ ಎಳೆದಂತಾಗಿದೆ. ನಿರ್ಗತಿಕ ಕುಟುಂಬದಲ್ಲಿರುವ ಯುವಕ-ಯುವತಿಯರಿಗೆ ಕಂಪನಿಗಳು ಮತ್ತು ಫ್ಯಾಕ್ಟರಿಗಳು ಕೆಲಸ ನೀಡಲು ಮುಂದಾಗಿ ಸಹಾಯ ಮಾಡಬೇಕೆಂದು ನುಡಿದರು.

ಪತ್ರಿಕಾಗೋಷ್ಠಿಯಲ್ಲಿ ನಟ ಸುರೇಶ್ ಹೆಬ್ಳೀಕರ್, ರಂಗಶಂಕರದ ಅರುಂಧತಿ ನಾಗ್, ಶಿಕ್ಷಣ ಕ್ಷೇತ್ರದ ರಾಜು ಚಂದ್ರಶೇಖರ್, ಡಾ. ಚಂದ್ರಶೇಖರ್ ಕಂಬಾರ ಮುಂತಾದವರು ಉಪಸ್ಥಿತರಿದ್ದರು.

ಪ್ರಜಾವಾಣಿ ಶನಿವಾರ 10ನೇ ಅಕ್ಟೋಬರ್ 2009




ನೆರೆ ಸಂತ್ರಸ್ಥರ ನೆರವಿಗಾಗಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಘಟಕಕ್ಕೆ ನಟಿ ಆರುಂಧತಿನಾಗ್ ಬೆಂಗಳೂರಿನಲ್ಲಿ ಶುಕ್ರವಾರ ದೇಣಿಗೆ ನೀಡಿದರು. ಕ್ರಿಕೆಟ್ ಆಟಗಾರ ಅನಿಲ್ ಕುಂಬ್ಳೆ, ಪರಿಸರವಾದಿ ಸುರೇಶ್ ಹೆಬ್ಳೀಕರ್ ಚಿತ್ರದಲ್ಲಿದ್ದಾರೆ. -ಪ್ರಜಾವಾಣಿ ಚಿತ್ರ

# 'ಪರಿಹಾರ ನಿಧಿಗಾಗಿ ಕ್ರಿಕೆಟ್ ಪಂದ್ಯ'

ಪ್ರಜಾವಾಣಿ ವಾರ್ತೆ

ಬೆಂಗಳೂರು: ರಾಯಲ್ ಚಾಲೆಂಜರ್ಸ್ ಮತ್ತು ಡೆಕ್ಕನ್ ಚಾರ್ಜರ್ಸ್ ನಡುವೆ ಪಂದ್ಯ ಏರ್ಪಡಿಸಿ ಅದರಿಂದ ಬರುವ ಆದಾಯವನ್ನು ಪರಿಹಾರ ನಿಧಿಗೆ ನೀಡುವ ಮೂಲಕ ನೆರೆ ಸಂತ್ರಸ್ಥರಿಗೆ ನೆರವಾಗಲು ಚಿಂತನೆ ನಡೆಲಾಗುತ್ತಿದೆ ಎಂದು ಕ್ರಿಕೆಟ್ ಆಟಗಾರ ಅನಿಲ್ ಕುಂಬ್ಳೆ ತಿಳಿಸಿದರು.

ಶುಕ್ರವಾರ ನಡೆದ ಪತ್ರಿಕಾಗೋಷ್ಠಿಯಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಘಟಕದ ಪರವಾಗಿ ಅವರು ಮಾತನಾಡಿದರು.

'ಇದು ಸಾಮಾನ್ಯ ವಿಷಯ ಅಲ್ಲ ಎಂದು ನಮಗೂ ತಿಳಿದಿದೆ. ಈ ಸಂದರ್ಭದಲ್ಲಿ ಇಂತಹ ಪಂದ್ಯ ಏರ್ಪಡಿಸುವುದು ಸುಲಭದ ಮಾತಲ್ಲ. ಆದರೂ ಈ ಬಗ್ಗೆ ಐಪಿಎಲ್ ಜತೆ ಚರ್ಚಿಸಿ ನಿರ್ಧಾರ ಪ್ರಕಟಿಸಲಾಗುವುದು' ಎಂದು ಅವರು ತಿಳಿಸಿದರು.

ಶಿಕ್ಷಣ ತಜ್ಞ ಡಾ. ವೂಡೇ ಪಿ.ಕೃಷ್ಣ ಮಾತನಾಡಿ, ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯು 'ನೋಡಲ್ ಏಜೆನ್ಸಿ' ರೀತಿ ಕಾರ್ಯ ನಿರ್ವಹಿಸುತ್ತಿದೆ ಎಂದರು.

ಸಹಾಯ ಮಾಡುವವರು ಕ್ರಾಸ್ ಮಾಡಿದ ಚೆಕ್ ಮತ್ತು ಡಿಮ್ಯಾಂಡ್ ಡ್ರಾಫ್ಟ್‌ಗಳನ್ನು ಭಾರತೀಯ ರೆಡ್ ಕ್ರಾಸ್ ಕರ್ನಾಟಕ ರಾಜ್ಯ ಶಾಖೆ ಹೆಸರಿಗೆ ನೀಡಬೇಕು ಎಂದು ಅವರು ಮನವಿ ಮಾಡಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, 1ನೇ ಮಹಡಿ, ರೇಸ್‌ಕೋರ್ಸ್ ರಸ್ತೆ ಅಥವಾ ಉತ್ತರ ಕರ್ನಾಟಕ ಪ್ರವಾಹ ಸಂತ್ರಸ್ಥರ ಖಾತೆ 2827201001192ಗೆ ಕೂಡ ನೀಡಬಹುದು.

ಮಾಹಿತಿಗೆ ದೂರವಾಣಿ ಸಂಖ್ಯೆ 98441 56100/ 98862 88703 ಅಥವಾ ಇ-ಮೇಲ್ ircskar@vsnl.net. ವೆಬ್‌ಸೈಟ್ www.durantha.in ಸಂಪರ್ಕಿಸಬಹುದು.

ಸಾಹಿತಿ ಜಯಂತ್ ಕಾಯ್ಕಿಣಿ, ನಟಿ ಆರುಂಧತಿ ನಾಗ್, ನಟ ಸುರೇಶ್ ಹೆಬ್ಳೀಕರ್, ಸಾಹಿತಿ ಡಾ.ಚಂದ್ರಶೇಖರ್ ಕಂಬಾರ, ರೆಡ್ ಕ್ರಾಸ್ ಸಂಸ್ಥೆ ರಾಜ್ಯ ಘಟಕದ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಕೋಶಾಧ್ಯಕ್ಷ ಟಿ. ಪ್ರಭಾಕರ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೋ. ಶ್ರೀನಿವಾಸಯ್ಯ, ಮಹಿಳಾ ಪರ ಹೋರಾಟಗಾರ್ತಿ ಡೋನ ಫರ್ನಾಂಡೀಸ್ ಇತರರು ಹಾಜರಿದ್ದರು.

ಹೊಸ ದಿಗಂತ ಶನಿವಾರ, 10 ಅಕ್ಟೋಬರ್ 2009

# ಚಾಂಪಿಯನ್ ಟೂರ್ನಿ ಲಾಭ ನೆರೆ ಪರಿಹಾರಕ್ಕೆ: ಕುಂಬ್ಳೆ ಮನವಿ

**ಬೆಂಗಳೂರು:** ಬೆಂಗಳೂರಿನಲ್ಲಿ ನಡೆಯುತ್ತಿರುವ ಚಾಂಪಿಯನ್ಸ್ ಟೂರ್ನಿಯಲ್ಲಿ ಸಂಗ್ರಹವಾಗುವ ಹಣವನ್ನು ನೆರೆ ಸಂತ್ರಸ್ತರಿಗೆ ನೀಡಲು ಕೆಎಸ್‌ಸಿಎ ಗೆ ಮನವಿ ಮಾಡುವುದಾಗಿ ಕ್ರಿಕೆಟಿಗ ಅನಿಲ್ ಕುಂಬ್ಳೆ ತಿಳಿಸಿದ್ದಾರೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಶುಕ್ರವಾರ ಏರ್ಪಡಿಸಿದ್ದ ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡಿದ ಅವರು, ಕ್ರಿಕೆಟ್‌ಗರು ಹಾಗೂ ಕನ್ನಡ ಚಿತ್ರನಟರು ಸೇರಿ ಕ್ರಿಕೆಟ್ ಆಡಿ ಬಂದ ಹಣವನ್ನು ನೆರೆ ಪರಿಹಾರಕ್ಕೆ ನೀಡುವುದಾಗಿ ಹೇಳಿದರು.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯ ನೋಡಲ್ ಏಜನ್ಸಿಯ ರೀತಿಯಲ್ಲಿ ಕೆಲಸ ನಿರ್ವಹಿಸುತ್ತಿದೆ. ಕೆನಡಿಯನ್ ರೆಡ್‌ಕ್ರಾಸ್ ಸಂಸ್ಥೆಯು ನೆರೆ ಪ್ರದೇಶದ ಜನರಿಗೆ ಸಹಾಯ ನೀಡಲು ಮುಂದೆ ಬಂದಿದ್ದು, ಪ್ರವಾಹ ಪ್ರದೇಶಗಳ ವೀಕ್ಷಣೆ ನಂತರ ಪರಿಹಾರ ನೀಡಲಿದೆ ಎಂದು ಭಾರತ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೆ ಪಿ ಕೃಷ್ಣ ತಿಳಿಸಿದರು. ನೆರೆ ಸಂತ್ರಸ್ತರಿಗೆ ನೆರವು ನೀಡಲು ಭಾರತೀಯ ರೆಡ್ ಕ್ರಾಸ್ ಸಂಸ್ಥೆಯೊಂದಿಗೆ ಹಲವು ಸಂಘ-ಸಂಸ್ಥೆಗಳು ಕೈ ಜೋಡಿಸಿದ್ದು, ಪರಿಹಾರ ಕಾರ್ಯಕ್ಕೆ ಮುಂದಾಗಿವೆ. ರೆಡ್‌ಕ್ರಾಸ್ ಸಂಸ್ಥೆ ತಕ್ಷಣ ಪರಿಹಾರಕ್ಕಾಗಿ 6 ಸಮಿತಿಗಳನ್ನು ರಚಿಸಿ, ಶಾಲೆಯಿಂದ ವಂಚಿತರಾದ ವಿದ್ಯಾರ್ಥಿಗಳಿಗಾಗಿ ಖಾಸಗಿ ಶೈಕ್ಷಣಿಕ ಪ್ರತಿಷ್ಠಾನಗಳನ್ನು ಸಂಪರ್ಕಿಸಿ ಪುನರ್ ಶಿಕ್ಷಣವನ್ನುಕೊಡಿಸುವ ವ್ಯವಸ್ಥೆ ಮಾಡಲಾಗಿದೆ ಎಂದು ಹೇಳಿದರು.

ಸಾಹಿತ್ಯ ಜಯಂತ್ ಕಾಯ್ಕಿಣಿ ಮಾತನಾಡಿ ಉತ್ತರ ಕರ್ನಾಟಕದಲ್ಲಿ ಉಂಟಾಗಿರುವ ಪ್ರವಾಹ ಗಾಯದ ಮೇಲೆ ಬರೆ ಎಳೆದಂತಾಗಿದೆ. ನಿರ್ಗತಿಕ ಕುಟುಂಬದಲ್ಲಿರುವ ಯುವಕ-ಯುವತಿಯರಿಗೆ ಕಂಪನಿಗಳು ಮತ್ತು ಫ್ಯಾಕ್ಟರಿಗಳು ಕೆಲಸ ನೀಡಲು ಮುಂದಾಗಿ ಸಹಾಯ ಮಾಡಬೇಕೆಂದು ನುಡಿದರು.

ಪತ್ರಿಕಾಗೋಷ್ಠಿಯಲ್ಲಿ ನಟ ಸುರೇಶ್ ಹೆಬ್ಳೀಕರ್, ನಟಿ ಅರುಂಧತಿ ನಾಗ್, ಶಿಕ್ಷಣ ಕ್ಷೇತ್ರದ ರಾಜು ಚಂದ್ರಶೇಖರ್, ಡಾ. ಚಂದ್ರಶೇಖರ್ ಕಂಬಾರ ಮುಂತಾದವರು ಉಪಸ್ಥಿತರಿದ್ದರು.

2009

# ಕ್ರೀಡಾಪಟುಗಳಿಂದ ದೇಣಿಗೆ

ಬೆಂಗಳೂರು, ಅ.9 – ನೆರೆ ಪೀಡಿತ ಉತ್ತರ ಕರ್ನಾಟಕ ಸಂತ್ರಸ್ತರಿಗೆ ನೆರವಿನ ಹಸ್ತ ಚಾಚಲು ಮುಂದಾಗಿರುವ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಹಣ ಸಂಗ್ರಹಿಸಲು ಇಂದಿನಿಂದ ಮುಂದಾಗಿದೆ.

ಪ್ರೆಸ್‌ಕ್ಲಬ್‌ನಲ್ಲಿಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಘಟಕದ ಅಧ್ಯಕ್ಷ ವೂಡೆ ಪಿ.ಕೃಷ್ಣ, ಕ್ರಿಕೆಟ್ ಪಟು ಅನಿಲ್‌ಕುಂಬ್ಳೆ, ಸುರೇಶ್ ಹೆಬ್ಳಿಕರ್, ಅರುಂದತಿ ನಾಗ್, ಡಾ.ಚಂದ್ರಶೇಖರ್ ಕಂಬಾರ, ರಾಜೀವ್ ಚಂದ್ರಶೇಖರ್, ಪ್ರಕಾಶ್ ಪಡುಕೋಣೆ ಸೇರಿದಂತೆ ಹಲವು ಸಂಘಟನೆಗಳ ಮುಖಂಡರು ದೇಣಿಗೆ ಸಂಗ್ರಹಣೆಗೆ ಚಾಲನೆ ನೀಡಿದರು.

ನೆರೆ ಪೀಡಿತ 18 ಜಿಲ್ಲೆಗಳಲ್ಲಿ ಪರಿಹಾರ ಕಾರ್ಯ ಕೈಗೊಳ್ಳಲು ರೆಡ್‌ಕ್ರಾಸ್ ಸಂಸ್ಥೆ ನೋಡಲ್ ಏಜೆನ್ಸಿಯಾಗಿ ಕಾರ್ಯ ನಿರ್ವಹಿಸುತ್ತಿದ್ದು, ಸಂತ್ರಸ್ತರಿಗೆ ಗೃಹೋಪಯೋಗಿ ವಸ್ತು, ಮೂಲಭೂತ ಸೌಕರ್ಯಗಳ ಅಗತ್ಯವಿದೆ ಎಂದು ಪತ್ರಿಕಾಗೋಷ್ಠಿಯಲ್ಲಿ ವೂಡೆ ಪಿ.ಕೃಷ್ಣ ತಿಳಿಸಿದರು.

ಈಗಾಗಲೇ ದೆಹಲಿಯ ರೆಡ್‌ಕ್ರಾಸ್ ಸಂಸ್ಥೆ 2 ಸಾವಿರ ಆಹಾರ ತಯಾರಿಕೆಯ ಪಾತ್ರೆಗಳನ್ನು ರವಾನಿಸಲು ಕ್ರಮ ಕೈಗೊಂಡಿದೆ. ಇನ್ನಷ್ಟು ಪರಿಹಾರ ಕಾರ್ಯ ಕೈಗೊಳ್ಳಲು ಸಂಸ್ಥೆಯೊಂದಿಗೆ ನೆರವಾಗಬೇಕೆಂದು ದಾನಿಗಳಲ್ಲಿ ಮನವಿ ಮಾಡಿದರು.

ಸಂಜೆವಾಣಿ ಶುಕ್ರವಾರ 9 ಅಕ್ಟೋಬರ್ 2009

# ನಿಧಿ ಸಂಗ್ರಹಕ್ಕೆ ಕ್ರೀಡಾಪಟುಗಳು

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಅ. ೯- ಉತ್ತರ ಕರ್ನಾಟಕದ ನೆರೆ ಸಂತ್ರಸ್ತರಿಗೆ ನೆರವಿನ ಮಹಾಪೂರ ಹರಿದಿದ್ದು, ಇದೀಗ ಕ್ರೀಡಾ ಮತ್ತು ಸಾಹಿತ್ಯ ಲೋಕದ ದಿಗ್ಗಜರು ಪರಿಹಾರ ನಿಧಿ ಸಂಗ್ರಹಿಸಲು ಮುಂದಾಗಿದ್ದಾರೆ.

ಪ್ರವಾಹದಿಂದ ಮನೆ-ಮಠ ಕಳೆದುಕೊಂಡ ಸಂತ್ರಸ್ತರಿಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಸಹಯೋಗದೊಂದಿಗೆ ಖ್ಯಾತ ಕ್ರೀಡಾ ಪಟುಗಳಾದ ಅನಿಲ್ ಕುಂಬ್ಳೆ (ಕ್ರಿಕೆಟ್), ಪ್ರಕಾಶ್ ಪಡುಕೋಣೆ (ಟೆನ್ನಿಸ್), ಸಾಹಿತಿಗಳಾದ ಚಂದ್ರಶೇಖರ್ ಕಂಬಾರ, ಹಿರಿಯ ಪರಿಸರವಾದಿಯಾದ ಸುರೇಶ್ ಹಬ್ಳಿಕರ್ ಹಾಗೂ ರಂಗನಾಯಕಿ ಆರುಂಧತಿನಾಗ್ ಸಾಹಿತಿ ಜಯಂತ್ ಕಾಯ್ಕಿಣಿ ಸೇರಿದಂತೆ ಮುಂತಾದ ಗಣ್ಯರು ಪರಿಹಾರ ನಿಧಿ ಸಂಗ್ರಹಿಸುವುದರೊಂದಿಗೆ ಜಾಗೃತಿ ಮೂಡಿಸುವ ಕಾರ್ಯ ಕೈಗೊಂಡಿದ್ದಾರೆ.

ಈಗಾಗಲೇ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯಶಾಖೆ ಈಗಾಗಲೇ ಸುಮಾರು 10 ಲಕ್ಷ ಮೌಲ್ಯದ ಸಾಮಗ್ರಿಗಳನ್ನು ವಿತರಿಸಲು ಕ್ರಮ ತೆಗೆದುಕೊಂಡಿದ್ದು, ಈ ಕಾರ್ಯದಲ್ಲಿ ಸಾಹಿತ್ಯ ಮತ್ತು ಕ್ರೀಡಾಲೋಕ ಸೇರಿದಂತೆ ಜನೋದಯ ಭಾರತ ಸ್ಕೌಟ್ಸ್ ಅಂಡ್ ಗೈಡ್ಸ್, ಭಾರತ ಸೇವಾದಳ, ಈಕೋ ವಾಚ್, ವಿಮೋಚನಾ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಭಾರತ ಯಾತ್ರಾ ಕೇಂದ್ರ ಅಗ್ನಿ ಬಳಗ ಮುಂತಾದ ಸಂಸ್ಥೆಗಳು ತಮ್ಮೊಂದಿಗೆ ಕೈಜೋಡಿಸಿವೆ ಎಂದು ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ಎಂ.ಜಿ. ನಾರಾಯಣ ಪತ್ರಿಕಾಗೋಷ್ಠಿಯಲ್ಲಿಂದು ತಿಳಿಸಿದರು.



ರೆಡ್‌ಕ್ರಾಸ್ ನಿಧಿಗೆ ಹಣ ನೀಡುತ್ತಿರುವ ಅರುಂಧತಿ ನಾಗ್, ಅನಿಲ್ ಕುಂಬ್ಳೆ, ಸುರೇಶ್ ಹೆಬ್ಳೀಕರ್, ರಾಜು ಚಂದ್ರಶೇಖರ್ ಹಾಗೂ ಡಾ. ಕಂಬಾರ.

ಕ್ರಿಕೆಟ್ ಆಟಗಾರ ಅನಿಲ್ ಕುಂಬ್ಳೆ, ಪರಿಸರವಾದಿ ಸುರೇಶ್ ಹಬ್ಳಿಕರ್, ಜಯಂತ್ ಕಾಯ್ಕಿಣಿ ಒಟ್ಟಾಗಿ ನೆರೆ ಸಂತ್ರಸ್ತರಿಗೆ ಪರಿಹಾರ ನಿಧಿ ನೀಡಲು ಮುಂದಾಗುವಂತೆ ಸಾರ್ವಜನಿಕರಲ್ಲಿ ಮನವಿ ಮಾಡಿದರು.

ರೆಡ್‌ಕ್ರಾಸ್ ಸಂಸ್ಥೆಯೊಂದಿಗೆ ಪಾಲ್ಗೊಂಡಿರುವ ಎಲ್ಲ ಸಂಘಟನೆಗಳು ಇಂದಿನಿಂದ ಪರಿಹಾರ ನಿಧಿ ಸಂಗ್ರಹಿಸಲು ಮುಂದಾಗಿರುವುದಾಗಿ ಎಲ್ಲ ಸಂಘಟನೆಯ ಪ್ರಮುಖರು ಒಮ್ಮತದಿಂದ ನಿರ್ಧರಿಸಿದರು.

ಪರಿಹಾರ ನಿಧಿ ನೀಡಲಿಚ್ಛಿಸುವವರು ಡಾ. ಒಡೇ ಪಿ. ಕೃಷ್ಣ 9844156100 ಅಥವಾ 9886288703 ಸಂಪರ್ಕಿಸಬಹುದು.

ಕನ್ನಡಪ್ರಭ, ಬೆಂಗಳೂರು
ಶನಿವಾರ, 10 ಅಕ್ಟೋಬರ್ 2009

# ಪ್ರವಾಹ ಪೀಡಿತರಿಗೆ ಮುಂದುವರಿದ ನೆರವು




## ನಟರು, ಕ್ರಿಕೆಟಿಗರ ಜಂಟಿ ಕಾರ್ಯಾಚರಣೆ

ಬೆಂಗಳೂರು: ನೆರೆ ಸಂತ್ರಸ್ತರಿಗೆ ಪರಿಹಾರ ಧನ ಸಂಗ್ರಹಿಸುವ ಉದ್ದೇಶದಿಂದ ಕ್ರಿಕೆಟ್ ಆಟಗಾರರು ಮತ್ತು ಸಿನಿಮಾ ನಟರ ನಡುವೆ ಪಂದ್ಯ ಏರ್ಪಡಿಸುವಂತೆ ರಾಜ್ಯ ಕ್ರಿಕೆಟ್ ಮಂಡಳಿಗೆ ಮನವಿ ಸಲ್ಲಿಸಲಾಗುವುದು ಎಂದು ಭಾರತ ಕ್ರಿಕೆಟ್ ತಂಡದ ಮಾಜಿ ಆಟಗಾರ ಅನಿಲ್ ಕುಂಬ್ಳೆ ತಿಳಿಸಿದ್ದಾರೆ. ಶುಕ್ರವಾರ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ಆಯೋಜಿಸಿದ್ದ ಪತ್ರಿಕಾಗೋಷ್ಠಿಯಲ್ಲಿ ಅವರು ಮಾತನಾಡಿದರು. ಚಾಂಪಿಯನ್ಸ್ ಲೀಗ್ ಪಂದ್ಯಾವಳಿಯಲ್ಲಿ ಡೆಕ್ಕನ್ ಚಾರ್ಜರ್ಸ್ ಮತ್ತು ರಾಯಲ್ ಚಾಲೆಂಜರ್ಸ್ ನಡುವಿನ ಪಂದ್ಯದಲ್ಲಿ ಸಂಗ್ರಹವಾಗುವ ಮೊತ್ತವನ್ನು ಪರಿಹಾರ ನಿಧಿಗೆ ನೀಡುವಂತೆ ಮನವಿ ಮಾಡಬೇಕೆಂದಿದ್ದೇನೆ ಎಂದರು. ಇದೇ ವೇಳೆ ಸುರೇಶ್ ಹೆಬ್ಳಿಕರ್, ಅರುಂಧತಿ ನಾಗ್, ಜಯಂತ್ ಕಾಯ್ಕಿಣಿ, ಡಾ. ವೂಡೇ ಪಿ. ಕೃಷ್ಣ, ಡಾ. ಚಂದ್ರಶೇಖರ ಕಂಬಾರ ಮತ್ತಿತರರು ಉಪಸ್ಥಿತರಿದ್ದರು.

# ಪ್ರವಾಹ ಪೀಡಿತರ ಕಣ್ಣೀರು ಒರೆಸಲು ಒಂದಾದ ಸಂಸ್ಥೆಗಳು

ಬೆಂಗಳೂರು, ಅ. 9: ಉತ್ತರ ಕರ್ನಾಟಕದ ನೆರಪೀಡಿತ ಸಂತ್ರಸ್ಥರ ನೆರವಿಗಾಗಿ ಇದೀಗ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಮೂಲಕ ವಿವಿಧ ಕ್ಷೇತ್ರಗಳಿಗೆ ಸೇರಿದ ಸಂಘನೆಗಳೂ ಕೈ-ಜೋಡಿಸಲಿದ್ದು, ಕನಿಷ್ಠ ಒಂದು ವರ್ಷದವರೆಗೂ ಪರಿಹಾರ ಕಾರ್ಯ ಕೈಗೊಳ್ಳಲು ನಿರ್ಧರಿಸಿವೆ.

ಈ ಪ್ರಯುಕ್ತ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಭಾರತ್ ಸೇವಾದಳ, ಇಕೋ ವಾಚ್, ವಿಮೋಚನಾ, ಶ್ರಮಿಕ ಮಕ್ಕಳ ಅಭ್ಯುದಯ ಕೇಂದ್ರ, ಶೇಷಾದ್ರಿಪುರ ಶಿಕ್ಷಣ ದತ್ತಿ, ಗ್ಲೋಬಲ್ ಹೆಲ್ತ್ ಅಂಡ್ ಪ್ರಮೋಷನ್, ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ (ಇಂಡಿಯಾ) ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಕಬ್ಬನ್‌ಪಾರ್ಕ್ ಮಿತ್ರ ಸಂಘ, ಕರ್ನಾಟಕ ರಾಜ್ಯ ರೈತ ಸಂಘ, ರಂಗಶಂಕರ, ಲಯನ್ಸ್ ಕ್ಲಬ್-ಮಾಧವನಗರ, ಭಾರತ ಯಾತ್ರಾ ಕೇಂದ್ರ, ಅಗ್ನಿ ಬಳಗ, ಕರ್ನಾಟಕ ವಾಲೆಂಟರಿ ಬ್ಲಡ್ ಡೋನರ್ಸ್ ಅಸೋಸಿಯೇಷನ್, ಡಾ। ಎಬ್‌ನೈಜರ್ ಇಂಟರ್‌ನ್ಯಾಷನಲ್ ಸ್ಕೂಲ್, ರೋಟರಿ ಬೆಂಗಳೂರು ಆರ್ಚರ್ಡ್ಸ್, ಕರ್ನಾಟಕ ರೈತ ಹೋರಾಟ ಸಮಿತಿ, ಜನೋದಯ, ಸರ್ ಎಂ.ವಿ. ಡಯಾಬಿಟಿಕ್ ಸೆಂಟರ್, ಜೈನ್ ಸಮೂಹ ಸಂಸ್ಥೆ, ಶ್ರೀಡಾನ್ಸ್ ಕಂಪೆನಿ ಮತ್ತಿತರ ಸಂಘ-ಸಂಸ್ಥೆಗಳು ಒಂದಾಗಿವೆ.

ಪ್ರಕೃತಿ ವಿಕೋಪಕ್ಕೆ ತುತ್ತಾದ ಸಂತ್ರಸ್ಥರಿಗೆ ನೆರವು ನೀಡಬೇಕೆಂದು ಬಹಳಷ್ಟು ಜನರಿಗೆ ವೈಯಕ್ತಿಕವಾಗಿ ಅನ್ನಿಸಿದರೂ, ಯಾವ ಮಾರ್ಗದ ಮೂಲಕ ಸಮರ್ಪಕವಾಗಿ ಪರಿಹಾರ ನಿಧಿ ಅಥವಾ ಆಹಾರ-ಸಾಮಗ್ರಿಗಳನ್ನು ಅವರಿಗೆ ತಲುಪಿಸಬೇಕೆಂಬ ಗೊಂದಲ ಉಂಟಾಗಬಹುದು. ಇಂಥ ಗೊಂದಲ ನಿವಾರಣೆಗಾಗಿಯೇ ಈ ಎಲ್ಲಾ ಸಂಘಟನೆಗಳೂ ಒಂದಾಗಿವೆ ಎಂಬುದು ಇಲ್ಲಿ ಪ್ರಸ್ತುತ.



ನೆರೆ ಸಂತ್ರಸ್ತರ ನೆರವಿಗೆ ನಿಧಿ ಸಂಗ್ರಹಿಸುವ ಆಂದೋಲನಕ್ಕೆ ನಟ ಹಾಗೂ ಪರಿಸರವಾದಿ ಸುರೇಶ್ ಹೆಬ್ಳೀಕರ್ ವಿವಿಧ ಸಂಘಟನೆಗಳ ನೆರವಿನೊಂದಿಗೆ ಶುಕ್ರವಾರ ಬೆಂಗಳೂರಿನಲ್ಲಿ ಚಾಲನೆ ನೀಡಿದರು. ಕ್ರಿಕೆಟ್ ಪಟು ಅನಿಲ್‌ಕುಂಬ್ಳೆ, ವಿಧಾನ ಪರಿಷತ್ ಸದಸ್ಯ ಡಾ। ಚಂದ್ರಶೇಖರ್ ಕಂಬಾರ, ನಟಿ ಆರುಂದತಿ ನಾಗ್, ಸ್ಕೌಟ್ ಅಂಡ್ ಗೈಡ್ಸ್ ಸಂಸ್ಥೆಯ ಆಯುಕ್ತ ಕೊಂಡಜ್ಜಿ ಷಣ್ಮುಕಪ್ಪ, ರೆಡ್‌ಕ್ರಾಸ್ ಸಂಸ್ಥೆಯ ರಾಜು ಚಂದ್ರಶೇಖರ್ ಮತ್ತಿತರರು ಉಪಸ್ಥಿತರಿದ್ದರು.

ಈ ವಿಚಾರವನ್ನು ಸ್ವತಃ ಕ್ರಿಕೆಟ್ ಪಟು ಅನಿಲ್ ಕುಂಬ್ಳೆ, ಪರಿಸರವಾದಿ ಸುರೇಶ್ ಸುರೇಶ್ ಹೆಬ್ಳೀಕರ್, ನಾಟಕಕಾರ ಡಾ। ಚಂದ್ರಶೇಖರ ಕಂಬಾರ, ರಂಗಕರ್ಮಿ ಅರುಂಧತಿ ನಾಗ್, ಕಥೆಗಾರ ಜಯಂತ ಕಾಯ್ಕಿಣಿ, ಕರ್ನಾಟಕ ಚಿತ್ರಕಲಾ ಪರಿಷತ್ ಅಧ್ಯಕ್ಷ ಟಿ. ಪ್ರಭಾಕರ್, ಗಾಂಧೀವಾದಿ ಡಾ। ಹೋ.ಶ್ರೀನಿವಾಸಯ್ಯ, ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಕೊಂಡಜ್ಜಿ ಷಣ್ಮುಖಪ್ಪ, ರಾಜ್ಯ ರೈತ ಸಂಘದ ಕೋಡಿಹಳ್ಳಿ ಚಂದ್ರಶೇಖರ್, ರೆಡ್ ಕ್ರಾಸ್ ಸಂಸ್ಥೆಯ ಡಬ್ಲ್ಯೂ.ಪಿ. ಕೃಷ್ಣ ಮತ್ತು ರಾಜ್ಯಸಭಾ ಸದಸ್ಯ ರಾಜೀವ್‌ಚಂದ್ರಶೇಖರ್, ರಂಗಸಂಘಟಕ ನಾಗರಾಜಸ್ವಾಮಿ ಇತರರು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ಸಂತ್ರಸ್ಥರಿಗೆ ಈಗಾಗಲೇ ಭಾರತೀಯ ರೆಡ್ ಕ್ರಾಸ್ ಸಂಸ್ಥೆ 10 ಲಕ್ಷ ಮೌಲ್ಯದ ಗೃಹೋಪಯೋಗಿ ವಸ್ತು, ಪಾತ್ರೆ, ಕಂಬಳಿ, ಬೆಡ್‌ಶೀಟ್ಸ್, ಆಹಾರ ಧಾನ್ಯಗಳು, ಔಷಧಿ, ಕುಡಿಯುವ ನೀರು ಪೂರೈಸಲು ಕ್ರಮ ಕೈಗೊಂಡಿದೆ. ಆದರೆ ಮುಂದಿನ ಹಂತದಲ್ಲಿ ಈ ಎಲ್ಲ ಸಂಸ್ಥೆಗಳ ಸಹಯೋಗದಲ್ಲಿ 'ನೋಡಲ್ ಏಜೆನ್ಸಿ' ರೀತಿಯಲ್ಲಿ ಮತ್ತಷ್ಟು ಪರಿಹಾರ ಕಾರ್ಯ ಕೈಗೊಳ್ಳಲಿದೆ ಎಂದು ಹೇಳಿದರು.

ಪ್ರಸ್ತುತದ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬರೂ ತುರ್ತಾಗಿ ನೆರವಿನ ಹಸ್ತ ಚಾಚಬೇಕು. ಈ ಸಂದರ್ಭದಲ್ಲಿ ಮುಹೂರ್ತ ನೋಡಬೇಡಿ. ಎಷ್ಟು ಸಾಧ್ಯವೋ ಅಷ್ಟೇ ಪರಿಹಾರ ನೀಡಿ ಸಂತ್ರಸ್ಥರ ಸಂಕಷ್ಟದಲ್ಲಿ ಭಾಗಿಯಾಗಿ ಎಂದು ಮನವಿ ಮಾಡಿದರು.

**ಗಾಯವನ್ನು ಅಳಿಸಿಹಾಕಿ:** ಜಯಂತ ಕಾಯ್ಕಿಣಿ ಮಾತನಾಡಿ, ಉತ್ತರ ಕರ್ನಾಟಕ ಎಂದರೆ ಅದೊಂದು ದೊಡ್ಡ ಗಾಯ. ಈಗ ಅದರ ಮೇಲೆ ಪ್ರಕೃತಿಯೇ ಬರೆ ಎಳೆದಿದೆ. ಈ ಸಂದರ್ಭದಲ್ಲಿ ಉತ್ತರ ಕರ್ನಾಟಕದ ನೆರೆಪೀಡಿತ ಪ್ರದೇಶಗಳ ಯುವಜನತೆಗೆ ಉದ್ಯೋಗ ನೀಡುವುದಕ್ಕಿಂತ ದೊಡ್ಡ ಪರಿಹಾರ ಕಾರ್ಯ ಮತ್ತೊಂದಿಲ್ಲ. ಈ ನಿಟ್ಟಿನಲ್ಲಿ ಕೈಗಾರಿಕೆಗಳು, ಸಂಘ- ಸಂಸ್ಥೆಗಳು, ಕಂಪೆನಿಗಳು ತಕ್ಷಣದಲ್ಲೇ ಉದ್ಯೋಗ ನೀಡಲು ಮುಂದಾಗಬೇಕು ಎಂದು ವಿಶೇಷವಾಗಿ ಮನವಿ ಮಾಡಿದರು. ದಾನಿಗಳು ದೇಣಿಗೆ ಚೆಕ್ ಅಥವಾ ಡಿಡಿ ಮೂಲಕ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ- ಉತ್ತರ ಕರ್ನಾಟಕ ಸಂತ್ರಸ್ತರ ಖಾತೆ 2827201001192 ಸಂಖ್ಯೆ ಅಥವಾ ಕ್ರಾಸ್ ಮಾಡಿದ ಚೆಕ್ ಅಥವಾ ಡಿಮ್ಯಾಂಡ್. ಡ್ರಾಫ್ಟ್‌ಗಳನ್ನು (ಡಿಡಿ) ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆ ಹೆಸರಿಗೆ ತೆಗೆದು ಪ್ರಧಾನ ಕಾರ್ಯದರ್ಶಿ, ಭಾರತೀಯ ರೆಡ್ ಕ್ರಾಸ್ ಸಂಸ್ಥೆ, ನಂ. 26, ರೆಡ್‌ಕ್ರಾಸ್ ಭವನ, 1ನೇ ಮಹಡಿ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು-01 ಇವರಿಗೆ ಕಳುಹಿಸಬಹುದು. ಮಾಹಿತಿಗೆ ಡಾ। ವ್ಹಡೆ.ಪಿ. ಕೃಷ್ಣ-9844156100, ರಾಜು ಚಂದ್ರಶೇಖರ್- 9900380238

ದಿ ಟೈಮ್ಸ್ ಆಫ್ ಇಂಡಿಯಾ, ಬೆಂಗಳೂರು
ಶನಿವಾರ, ಅಕ್ಟೋಬರ್ 10, 2009

# ಬೆಳೆ ಪರಿಹಾರ ಪರಿಷ್ಕರಿಸಲು ಆಗ್ರಹ

ಬೆಂಗಳೂರು: ಪ್ರವಾಹದಿಂದ ಉಂಟಾಗಿರುವ ಬೆಳೆ ನಷ್ಟಕ್ಕೆ ಕೇಂದ್ರ ಸರ್ಕಾರ ನೀಡುವ ಪರಿಹಾರವನ್ನು ದುಪ್ಪಟ್ಟು ಮಾಡುವಂತೆ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಒತ್ತಾಯಿಸಿದ್ದಾರೆ.

ಬೆಳೆ ನಷ್ಟಕ್ಕೆ ಓಬಿರಾಯನ ಕಾಲದ ಪರಿಹಾರ ನೀಡಲಾಗುತ್ತಿದೆ. ಇದನ್ನು ಪರಿಷ್ಕರಿಸಿ ದುಪ್ಪಟ್ಟು ನೀಡಬೇಕು. ಈ ಬಗ್ಗೆ ಶನಿವಾರ ಪ್ರಧಾನ ಮಂತ್ರಿಗಳಲ್ಲಿಯೂ ಮನವಿ ಮಾಡಲಾಗುವುದು ಎಂದರು. ಉತ್ತರ ಕರ್ನಾಟಕದ ನೆರೆ ಸಂತ್ರಸ್ತರಿಗಾಗಿ ಪರಿಹಾರ ನಿಧಿಗೆ ಹಣ ಸಂಗ್ರಹಿಸಲು ಶುಕ್ರವಾರ ಪಾದಯಾತ್ರೆ ಕೈಗೊಳ್ಳುವ ಮುನ್ನ ಸುದ್ದಿಗಾರರೊಂದಿಗೆ ಮಾತನಾಡಿದರು. ಗೃಹ ಸಚಿವ ಡಾ.ವಿ.ಎಸ್. ಆಚಾರ್ಯ ಮಾತನಾಡಿ, ಕೇಂದ್ರ ಗೃಹ ಸಚಿವರು ರಾಷ್ಟ್ರೀಯ ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿ ನೀಡಲಾಗಿದ್ದ 500 ಕೋಟಿ ರೂ.ಗಳನ್ನು ಬಳಸುವಂತೆ ಹೇಳಿದ್ದಾರೆ. ಎಷ್ಟು ಮತ್ತು ಹೇಗೆ ಬಳಸಬೇಕು ಎಂದು ಶನಿವಾರ ಪ್ರಧಾನಿಗಳೊಂದಿಗೆ ಮಾತುಕತೆ ನಡೆಸಿ ಸ್ಪಷ್ಟನೆ ಪಡೆಯಲಾಗುವುದು ಎಂದರು.

ಟಿಒಐ



ಸಂತ್ರಸ್ತರ ನೆರವಿಗೆ ದೇಣಿಗೆ ನೀಡಿದ ಅರುಂಧತಿ ನಾಗ್, ಕುಂಬ್ಳೆ, ಸುರೇಶ್ ಹೆಬ್ಳಿಕರ್, ಚಂದ್ರಶೇಖರ ಕಂಬಾರ

ಈ ಸಂಜೆ

ಶುಕ್ರವಾರ, 09 ಅಕ್ಟೋಬರ್, 2009



ಆರೋಗ್ಯ ಮತ್ತು ಪರಿಸರ ಜಾಗೃತಿ ಮೂಡಿಸುವ ಅಂಗವಾಗಿ ಬೆಂಗಳೂರಿನಿಂದ ಮೈಸೂರಿಗೆ ಶೇಷಾದ್ರಿಪುರಂ ಕಾಲೇಜಿನ ಎನ್‌ಎಸ್‌ಎಸ್ ಶಿಬಿರಾರ್ಥಿಗಳು ಹಮ್ಮಿಕೊಂಡಿರುವ ಸೈಕಲ್ ರ್‍ಯಾಲಿಗೆ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ ಕೃಷ್ಣ ಚಾಲನೆ ನೀಡಿದರು. ಪ್ರಾಂಶುಪಾಲ ನರನಹಳ್ಳಿ ಬಾಲಸುಬ್ರಹ್ಮಣ್ಯಂ ಇದ್ದರು.

ಇಂದು ಸಂಜೆ

ಶುಕ್ರವಾರ, ಅ.9, 2009




ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆ ಮತ್ತು ಸ್ಪರ್ಶ ಆಸ್ಪತ್ರೆ ಸಹಯೋಗದಲ್ಲಿ ರಕ್ತದಾನ ಶಿಬಿರವನ್ನು ಏರ್ಪಡಿಸಲಾಗಿತ್ತು. ಸ್ಪರ್ಶ ಆಸ್ಪತ್ರೆಯ ಅಧ್ಯಕ್ಷ ಡಾ.ಶರಣ್ ಎಸ್.ಪಾಟೀಲ್, ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆಯ ಡಾ. ಹೊಂಡ್ಯೆ ಪಿ. ಕೃಷ್ಣ, ಕಾಲೇಜಿನ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರೊ.ಎ.ಆರ್.ಶ್ರೀನಿವಾಸ್, ಜಂಟಿ ಕಾರ್ಯದರ್ಶಿ ಶ್ರೀನಿವಾಸ್ ಶಿಬಿರದಲ್ಲಿದ್ದರು.

ಸಂಯುಕ್ತ ಕರ್ನಾಟಕ

# 'ಉದಯವಾಗಲಿ' ಹಾಡಿಗೆ ಸಿಗದ ಪ್ರಾಮುಖ್ಯತೆ: ಶಿರಹಟ್ಟಿ ವಿಷಾದ

ಬೆಂಗಳೂರು, ಅ. 4 : ಹುಯಿಲಗೋಳ ನಾರಾಯಣರಾಯರು ಬರೆದ ಉದಯವಾಗಲಿ ಕನ್ನಡ ಚಲುವ ಕನ್ನಡ ಹಾಡಿಗೆ ಪ್ರಾಮುಖ್ಯತೆ ಸಿಗಲಿಲ್ಲ ಎಂದು ಬೆಂಗಳೂರು ದೂರದರ್ಶನ ಕೇಂದ್ರದ ನಿವೃತ್ತ ನಿರ್ದೇಶಕ ಜಿ.ಎಂ. ಶಿರಹಟ್ಟಿ ವಿಷಾದ ವ್ಯಕ್ತಪಡಿಸಿದರು.

ಹುಯಿಲಗೋಳ ನಾರಾಯಣ–ರಾಯರ 125 ಜಯಂತೋತ್ಸವದ ಅಂಗವಾಗಿ ಹಂಸಜ್ಯೋತಿ ಸಂಸ್ಥೆ ಹಮ್ಮಿಕೊಂಡಿದ್ದ ಸಂಸ್ಮರಣೆ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಹುಯಿಲಗೋಳ ನಾರಾಯಣರಾಯರ ಹಾಡಿನಿಂದ ಕರ್ನಾಟಕ ಏಕೀಕರಣವಾಯಿತಲ್ಲದೆ, ವೈಮನಸ್ಸುಗಳು ಹೋಗಿ ಎಲ್ಲ ಒಂದಾದರೂ ಆ ಹಾಡಿಗೆ ಮಾತ್ರ ಯೋಗ್ಯ ಸ್ಥಾನ ಸಿಗಲೇ ಇಲ್ಲ ಎಂದರು.

ಒಂದು ಕೃತಿ ವಿಸ್ತಾರವಾಗಿ ಹೇಳುವುದಕ್ಕಿಂತಲೂ ಸುಂದರವಾಗಿ ಕನ್ನಡ ನಾಡಿನ ಶ್ರೇಷ್ಠತೆಯನ್ನು ಈ ಹಾಡು ವಿಸ್ತರಿಸುತ್ತದೆ. ನಾಡಿನ ಶ್ರೇಷ್ಠ ಹಾಡುಗಳ ಸಾಲಿನಲ್ಲಿ ಸೇರಿದರೂ ಅವಕ್ಕೆ ಸಿಗಬೇಕಾದ ಗೌರವ ದೊರೆತಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು.

ಉತ್ತರ ಕರ್ನಾಟಕ ಜನತೆ ಇರುವುದರಲ್ಲೇ ಸಂತೃಪ್ತ ಜೀವನ ನಡೆಸುವವರು. ಅವರ ಬದುಕಿನಲ್ಲಿ ದುಃಖ ದುಮ್ಮಾನ ಸಾಕಷ್ಟಿದ್ದರೂ ಯಾವುದೇ ಸರ್ಕಾರ, ಅಧಿಕಾರಿಗಳು ಅದರತ್ತ ಗಮನ ಹರಿಸಿಲ್ಲ. ಬೆಂಗಳೂರಿನಲ್ಲಿ ಉತ್ತರ ಕರ್ನಾಟಕ ಎಂದರೆ ಜೋಳದ ರೊಟ್ಟಿ ಎನ್ನುವಂತಹ ಪರಿಸ್ಥಿತಿ ಬಂದಿದೆ ಎಂದು ಅಸಮಾಧಾನ ವ್ಯಕ್ತಪಡಿಸಿದರು.

ಚಿತ್ರಸಾಹಿತಿ ನಾಗೇಂದ್ರ ಪ್ರಸಾದ್ ಮಾತನಾಡಿ, ಹುಯಿಲಗೋಳ ನಾರಾಯಣ–ರಾಯರು ಸ್ವಾತಂತ್ರ್ಯ ಪೂರ್ವದ ಸಾಂಸ್ಕೃತಿಕ ರಾಯಭಾರಿ. ಸರ್ಕಾರ ಅವರನ್ನು ಸ್ಮರಿಸಲಿಲ್ಲ ಎಂದು ವಿಷಾದಿಸಿದ ಅವರು, ಉದಯವಾಗಲಿ ಕನ್ನಡ ನಾಡು ಹಾಡನ್ನು ಬಿಟ್ಟು ಅವರ ಬೇರೆ ಹಾಡುಗಳು ಪ್ರಚಲಿತಕ್ಕೆ ಬರಲೇ ಇಲ್ಲ. ಅಂತಹ ಹಾಡುಗಳನ್ನು ಮತ್ತು ಅವರ ಜೀವನದ ಹಾದಿಯನ್ನು ಪರಾಮರ್ಶಿಸುವ ಪುಸ್ತಕವೊಂದನ್ನು ಪ್ರಕಟಿಸಬೇಕು ಎಂದು ಸಲಹೆ ನೀಡಿದರು.

ಶಿಕ್ಷಣ ತಜ್ಞ ಗುರುರಾಜ ಕರ್ಜಗಿ ಮಾತನಾಡಿ, ನಾರಾಯಣರಾಯರ ಹಾಡು ಕನ್ನಡಿಗರನ್ನು ಜಾಗೃತಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ಅವರು ಕವಿ, ಶಿಕ್ಷಕ, ನಾಟಕಕಾರ, ಸ್ವಾತಂತ್ರ್ಯಹೋರಾಟಗಾರರಾಗಿ ಕನ್ನಡ ನಾಡಿಗೆ, ದೇಶಕ್ಕೆ ಸೇವೆ ಸಲ್ಲಿಸಿದ್ದಾರೆ ಎಂದು ಸ್ಮರಿಸಿದರು.

ಶಿಕ್ಷಕರಾದವರು ತಾವು ನಡೆದುಬಂದ ಹಾದಿಯನ್ನು ದಾಖಲಿಸುವುದನ್ನು ಮರೆತಿದ್ದಾರೆ. ಅವರ ಅನುಭವ ದಾಖಲು ಮಾಡಿದರೆ ಮುಂದಿನ ಪೀಳಿಗೆಗೆ ಅನುಕೂಲವಾಗಲಿದೆ ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಹುಯಿಲಗೋಳ ನಾರಾಯಣರಾಯರ ಮೊಮ್ಮಗಳು ರಾಧಾ ಕುಲಕರ್ಣಿ ರಚಿಸಿದ 'ಪಾತ್ ಪೇವ್ಡ್ ಆಸ್ ಎ ಟೀಚರ್' ಕೃತಿಯನ್ನು ಬಿಡುಗಡೆ ಮಾಡಲಾಯಿತು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ವಿದುಷಿ ಶ್ಯಾಮಲಾ ಜಿ. ಭಾವೆ, ಉದ್ಯಮಿ ಅನಿಲ್ ಶ್ರೀನಿವಾಸ್, ಹಂಸಜ್ಯೋತಿ ಸಂಸ್ಥೆ ಅಧ್ಯಕ್ಷ ವೆಂಕಟೇಶ್ ಮತ್ತಿತರರು ಉಪಸ್ಥಿತರಿದ್ದರು.

ಹೊಸ ದಿಗಂತ 05-10-2009, ಸೋಮವಾರ

# ಹುಯಿಲಗೋಳರ ನಾಡ ಗೀತೆಗೆ ಮನ್ನಣೆ ಸಿಗಲಿಲ್ಲ

**ಬೆಂಗಳೂರು:** ಹುಯಿಲಗೋಳ ನಾರಾಯಣರಾಯರ ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು ಗೀತೆಗೆ ನಿರೀಕ್ಷಿತ ಗೌರವ ದೊರೆತಿಲ್ಲ ಎಂದು ದೂರದರ್ಶನ ಮಾಜಿ ನಿರ್ದೇಶಕ ಜಿ.ಎಂ. ಶಿರಹಟ್ಟಿ ವಿಷಾದ ವ್ಯಕ್ತಪಡಿಸಿದ್ದಾರೆ.

ಹಂಸಜ್ಯೋತಿ ಸಂಸ್ಥೆ ನಗರದಲ್ಲಿ ಭಾನುವಾರ ಆಯೋಜಿಸಿದ್ದ ಹುಯಿಲಗೋಳ ನಾರಾಯಣ ರಾಯರ 125ನೇ ಜಯಂತ್ಯುತ್ಸವ ಕಾರ್ಯಕ್ರಮ ಅಧ್ಯಕ್ಷತೆ ವಹಿಸಿ ಮಾತನಾಡಿದರು.

ನಾರಾಯಣರಾಯರ ಗೀತೆ ವಿಶಿಷ್ಟವಾಗಿದ್ದು, ರಾಜ್ಯದ ಹಿರಿಮೆಯನ್ನು ಭಿನ್ನವಾಗಿ ತೆರೆದಿಡುತ್ತದೆ. ಈ ಗೀತೆಗೆ ಸೂಕ್ತ ಮನ್ನಣೆ ದೊರೆಯಲಿಲ್ಲ. ಆದರೆ, ಕವಿತೆಯ ಪ್ರೇರಣೆ, ಆ ಮೂಲಕ ಜನರಲ್ಲಿ ಹೊಸ ಹುರುಪು ತುಂಬಿದ್ದನ್ನು ಮತ್ತು ವಿಶೇಷತೆಯನ್ನು ಯಾರೂ ಕಡಿಮೆ ಮಾಡಲು ಸಾಧ್ಯವಿಲ್ಲ ಎಂದು ಶಿರಹಟ್ಟಿ ಹೇಳಿದರು.

ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಚಿತ್ರ ಸಾಹಿತಿ ನಾಗೇಂದ್ರ ಪ್ರಸಾದ್, ನಾರಾಯಣ ರಾಯರು ಸಾಹಿತ್ಯ, ಸಂಗೀತ, ರಂಗಭೂಮಿ ಮತ್ತು ಶಿಕ್ಷಣ ಕ್ಷೇತ್ರಕ್ಕೆ ಸಹ ಅಪಾರ ಕೊಡುಗೆ ನೀಡಿದ್ದಾರೆ. ಆದರೆ, ಈ ಕುರಿತು ಸಮಗ್ರ ಮಾಹಿತಿ ನೀಡುವ ಸಾಹಿತ್ಯ ಈ ತನಕ ಜನಸಾಮಾನ್ಯರನ್ನು ತಲುಪಿಲ್ಲ ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ನಾರಾಯಣರಾಯರ ಮೊಮ್ಮಗಳಾದ ಶಿಕ್ಷಕಿ ರಾಧಾ ಕುಲಕರ್ಣಿ ಅವರ ಪಾಥ್ ಪೇವಡ್ ಎಸ ಎ ಟೀಚರ್ ಆಂಗ್ಲ ಕೃತಿಯನ್ನು ಲೋಕಾರ್ಪಣೆ ಮಾಡಲಾಯಿತು.

ಖ್ಯಾತ ಅಂಕಣಕಾರ ಮತ್ತು ಶಿಕ್ಷಣ ತಜ್ಞ ಡಾ. ಗುರುರಾಜ ಕರ್ಜಗಿ, ಗಾನ ವಿದುಷಿ ಶಾಮಲಾ ಜಿ. ಭಾವೆ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಕಾರ್ಯದರ್ಶಿ ಪಿ. ಕೃಷ್ಣ, ಉದ್ಯಮಿ ಅನಿಲ್‌ಶ್ರೀನಿವಾಸ್, ಪತ್ರಕರ್ತ ಗೌರೀಶ್ ಅಕ್ಕಿ, ಹಂಸಜ್ಯೋತಿ ಸಂಸ್ಥೆ ಅಧ್ಯಕ್ಷ ಸಿ.ಎಂ. ವೇಂಕಟೇಶ್ ಹಾಗೂ ಕಾರ್ಯದರ್ಶಿ ಮುರಳೀಧರ್ ಇತರರು ಇದ್ದರು. ಬಳಿಕ ನಾರಾಯಣರಾಯರ 12 ಗೀತೆಗಳ ಗಾಯನ ಕಾರ್ಯಕ್ರಮ ನಡೆಯಿತು.

ಈ ಸಂಜೆ
ಶನಿವಾರ, 03 ಅಕ್ಟೋಬರ್, 2009



ನಗರದ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಜಲಮಂಡಳಿಯ ಪ್ರಧಾನ ಅಭಿಯಂತರ ಎಂ.ಎಸ್. ತಿಪ್ಪೇಸ್ವಾಮಿ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಹೊ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಮತ್ತಿತರರು ಇದ್ದರು.

## ಹುಯಿಲಗೋಳ ನಾರಾಯಣರಾಯರ 125ನೇ ಜಯಂತ್ಯುತ್ಸವ

# ಸಂಸ್ಮರಣೆ-ಗೀತ ಗಾಯನ

ಹಂಸಜ್ಯೋತಿ ಸಂಸ್ಥೆಯು ಕವಿ ಹಾಗೂ ನಾಟಕಕಾರ ಹುಯಿಲಗೋಳ ನಾರಾಯಣರಾಯರ 125ನೇ ಜಯಂತ್ಯುತ್ಸವದ ಸಲುವಾಗಿ ಸಂಸ್ಮರಣೆ-ಗೀತ ಗಾಯನ ಕಾರ್ಯಕ್ರಮವನ್ನು ಅ.4ರಂದು ಏರ್ಪಡಿಸಿದೆ.

ಇದೇ ಸಂದರ್ಭದಲ್ಲಿ ರಾಧಾ ಕುಲಕರ್ಣಿಯವರ 'ಪಾತ್ ವೇವ್ಡ್ ಆ್ಯಸ್ ಎ ಟೀಚರ್' ಪುಸ್ತಕ ಬಿಡುಗಡೆ ಸಮಾರಂಭ ಹಮ್ಮಿಕೊಳ್ಳಲಾಗಿದೆ. ಮಾಜಿ ಸಚಿವ ಎಚ್.ಕೆ. ಪಾಟೀಲ್ ಅಧ್ಯಕ್ಷತೆ ವಹಿಸುವರು. ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ನಲ್ಲೂರು ಪ್ರಸಾದ್, ಸಂಗೀತ ನಿರ್ದೇಶಕ ಹಂಸಲೇಖ, ಶಿಕ್ಷಣ ತಜ್ಞ ಗುರುರಾಜ ಕರ್ಜಗಿ, ಪತ್ರಕರ್ತೆ ಗೌರೀಶ್ ಆಕ್ಕಿ, ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಸಾಯಿ ಸೂರ್ಯ ಹೋಲ್ಡಿಂಗ್ಸ್ ಪ್ರೈವೇಟ್ ಲಿಮಿಟೆಡ್‌ನ ವ್ಯವಸ್ಥಾಪಕ ನಿರ್ದೇಶಕ ಅನಿಲ್ ಶ್ರೀನಿವಾಸ್, ಚಲನಚಿತ್ರ ನಿರ್ದೇಶಕ ಡಾ. ವಿ. ನಾಗೇಂದ್ರ ಪ್ರಸಾದ್ ಅತಿಥಿಗಳಾಗಿ ಭಾಗವಹಿಸುವರು.

ಹುಯಿಲಗೋಳ ನಾರಾಯಣರಾಯರ ಗೀತಗಾಯನದಲ್ಲಿ ಶಂಕರ್ ಶ್ಯಾನುಬಾಗ್, ಅನುಪಮ ಆರ್. ರಾವ್, ರವೀಂದ್ರ ಸೊರಗಾಂವಿ, ಮಾಲಿನಿ ಕೇಶವಪ್ರಸಾದ್, ಸುಜನ ಸಂಗೀತ ಶಾಲೆಯ ವಿದ್ಯಾರ್ಥಿಗಳು ಹಾಡುವರು. ಕಾವ್ಯಾ ಜಿ. ರಾವ್ ನೃತ್ಯ ಪ್ರದರ್ಶಿಸುವರು.

ವೆಂಕಟೇಶ್ ಹಾಲ್ವಾಡು-ಹಾರ್ಮೋನಿಯಂ, ಹನುಮಂತ ಕಾರಟಗಿ-ತಬಲ, ಹರೀಶ್-ಮ್ಯಾಂಡೊಲಿನ್, ಎಸ್.ವಿ. ಭಾಸ್ಕರ್-ಕೊಳಲು, ಕೃಷ್ಣ-ರಿದಂ ಪ್ಯಾಡ್ ಹಾಗೂ ಲಕ್ಷ್ಮೀಪತಿ-ಡೋಲಕ್‌ನಲ್ಲಿ ಸಾಥ್ ನೀಡುವರು.

### ನಾರಾಯಣರಾಯರ ಬಗ್ಗೆ

'ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು' ಗೀತೆಯ ರಚನೆಕಾರ ಕವಿ ಹುಯಿಲಗೋಳ ನಾರಾಯಣರಾಯರು, ಕನ್ನಡದ ಜನತೆಯ ಮನೆಮನೆಗಳಲ್ಲಿ ಚಿರಸ್ಮರಣೀಯರಾಗಿದ್ದಾರೆ. ಕನ್ನಡದ ಕಹಳೆಯಾಗಿ, ಶ್ರೇಷ್ಠ ಕವಿಯಾಗಿ ರಾಜ್ಯದ ಆದ್ಯ ಸಾಮಾಜಿಕ ನಾಟಕಕಾರರಾಗಿ, ರಂಗಭೂಮಿಯ ಪ್ರಯೋಗಶೀಲ ಪ್ರವರ್ತಕರಾಗಿ, ಶಿಕ್ಷಣ ಸಂಸ್ಥೆಯ ಸಂಸ್ಥಾಪಕರಾಗಿ, ಸ್ವಾತಂತ್ರ್ಯ ಯೋಧರಾಗಿ, ಸಂಸ್ಕೃತಿಯ ಸಂವಾಹಕರಾಗಿ ಜೀವನದ ಸಾರ್ಥಕತೆ ಸಾಧಿಸಿದ್ದಾರೆ.

ಇವರ ಸಾಹಿತ್ಯ ಕೃತಿಗೆ ಹಾಗೂ ಇವರ ಮೇರು ವ್ಯಕ್ತಿತ್ವಕ್ಕೆ ಮೆಚ್ಚಿದ ಕನ್ನಡದ ಅನೇಕ ಸಾಹಿತ್ಯಗಳು ಅವರ ಅಭಿಮಾನಿಗಳಾದರು. ಕನ್ನಡ ನಾಡಿನ ಏಕೀಕರಣಕ್ಕೆ ಸೆಣಸಿ ನಾಡಿನ ಸರ್ವತೋಮುಖ ಪ್ರಗತಿಗಾಗಿ ನಿರಂತರ ಹಾರೈಸಿದ ಧೀಮಂತ ಮಹಾಪುರುಷರಿವರು. ತಮ್ಮ ವ್ಯಕ್ತಿಗೌರವದ ಪರಾಕಾಷ್ಠೆಯನ್ನು ಪ್ರದರ್ಶಿಸಿದ ನಿಷ್ಕಳಂಕ, ನಿರ್ಮಲ ವ್ಯಕ್ತಿ ಹುಯಿಲಗೋಳ ನಾರಾಯಣರಾಯರು. ಕೀರ್ತಿಗಾಗಿ ಕಾತರಿಸದ ಈ ಸ್ಥಿತಪ್ರಜ್ಞರಿಗೆ ಗೌರವ, ಸನ್ಮಾನಗಳು ತಾವೇ ತಾವಾಗಿ ಹುಡುಕಿಕೊಂಡು ಬಂದವು. ಅವುಗಳಲ್ಲಿ ಪ್ರಮುಖವಾದದ್ದು ರಾಷ್ಟ್ರಪತಿ ರಾಜೇಂದ್ರ ಪ್ರಸಾದರಿಂದ ಪಡೆದ ಸ್ವರ್ಣಪದಕ. ಅವರ 125ನೇ ವರ್ಷದ ಜನ್ಮದಿನದಂದು ಅವರಿಗೆ ಅನಂತ ನಮನಗಳು.

ಸ್ಥಳ: ಶೇಷಾದ್ರಿಪುರ ಕಾಲೇಜು ಆವರಣ, ಶೇಷಾದ್ರಿಪುರ. ಸಮಯ: ಸಂಜೆ 6. ಮೊಬೈಲ್: 94480 93409.



ಕವಿ ಹಾಗೂ ನಾಟಕಕಾರ ಹುಯಿಲಗೋಳ ನಾರಾಯಣರಾಯರ 125ನೇ ಜಯಂತ್ಯುತ್ಸವವನ್ನು ಅತ್ಯಂತ ವಿಶಿಷ್ಟವಾಗಿ ಆಚರಿಸಲು ನಿರ್ಧರಿಸಿರುವ ಹಂಸಜ್ಯೋತಿ ಸಂಸ್ಥೆಯು ನಗರದಲ್ಲಿ ಸಂಸ್ಮರಣೆ-ಗೀತ ಗಾಯನ ಕಾರ್ಯಕ್ರಮ ಹಮ್ಮಿಕೊಂಡಿದೆ. 'ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು' ಗೀತೆಯ ರಚನೆಕಾರ ಕವಿ ಹುಯಿಲಗೋಳ ನಾರಾಯಣರಾಯರಿಗೆ ಹೀಗೆ ಪದನಮನ ಅರ್ಪಿಸುತ್ತಿದೆ.



ಮಾಲಿನಿ ಕೇಶವ ಪ್ರಸಾದ್



ಶಂಕರ ಶ್ಯಾನುಬಾಗ್



ಅನುಪಮಾ ಆರ್. ರಾವ್



ರವೀಂದ್ರ ಸೊರಗಾವಿ

ಪ್ರಜಾವಾಣಿ ಶನಿವಾರ 3ನೇ ಅಕ್ಟೋಬರ್ 2009

# 'ಗಾಂಧಿ ಸ್ಮಾರಕ ಭವನಕ್ಕೆ ನೆರವು'

ಪ್ರಜಾವಾಣಿ ವಾರ್ತೆ

**ಬೆಂಗಳೂರು:** ಗಾಂಧಿ ಸ್ಮಾರಕ ಭವನ ನಿರ್ಮಾಣಕ್ಕೆ ಸರ್ಕಾರದ ವತಿಯಿಂದ ಅಗತ್ಯ ಅನುದಾನ ಬಿಡುಗಡೆ ಮಾಡಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧಿ ಪ್ರತಿಷ್ಠಾನ ಶುಕ್ರವಾರ ಏರ್ಪಡಿಸಿದ್ದ ಗಾಂಧಿ ಜಯಂತಿ ಮತ್ತು ವಿಶ್ವ ಅಹಿಂಸಾ ದಿನಾಚರಣೆಯಲ್ಲಿ ಭಾಗವಹಿಸಿ ಅವರು ಮಾತನಾಡಿದರು.

'ಗಾಂಧೀಜಿಯವರಿಗೆ ಸಂಬಂಧಪಟ್ಟ ಯಾವುದೇ ಕೆಲಸವಿದ್ದರೂ ಅದನ್ನು ಕರ್ತವ್ಯ ಎಂಬಂತೆ ಮಾಡುತ್ತೇನೆ. ಅವರ ವಿಚಾರ ಮತ್ತು ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವ ಮೂಲಕ ನಾವು ಗೌರವ ಸಲ್ಲಿಸಬೇಕು' ಎಂದು ಹೇಳಿದರು.



ವಿದೇಶಿಯರು ಗಾಂಧೀಜಿ ವಿಚಾರಧಾರೆಯ ಬಗ್ಗೆ ಆಸಕ್ತಿ ತಳೆಯುತ್ತಿದ್ದಾರೆ. ಆದರೆ ನಮ್ಮ ದೇಶದಲ್ಲಿ ಅವುಗಳತ್ತ ನಿರ್ಲಕ್ಷ್ಯ ತೋರಲಾಗುತ್ತಿದೆ. ಜೀವನದಲ್ಲಿ ಅಳವಡಿಸಿಕೊಳ್ಳಲು ಹಿಂದೇಟು ಹಾಕುತ್ತಿದ್ದಾರೆ ಎಂದು ಅವರು ವಿಷಾದಿಸಿದರು.

ಗಾಂಧಿ ಸ್ಮಾರಕ ಭವನದ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಮಾತನಾಡಿ 'ಗಾಂಧಿ ಭವನದ ನಿರ್ವಹಣೆಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಬೇಕು' ಎಂದರು.

ಇದೇ ಸಂದರ್ಭದಲ್ಲಿ 'ಮುಂಬೈ ದಾಳಿ ಎಚ್ಚರಿಕೆ ಗಂಟೆ' ಕೃತಿಯ ಲೇಖಕ ಪ್ರವೀಣ್ ಲೋಕೇಶ್ವರ್ ಅವರಿಗೆ ಜಯಶ್ರೀ ದತ್ತಿ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಮೂರು ದಿನಗಳು ನಡೆಯುವ ವಿವಿಧ ಕಾರ್ಯಕ್ರಮಗಳಲ್ಲಿ ಖಾದಿ ವಸ್ತ್ರಗಳ ಮಾರಾಟ ಮತ್ತು ಪುಸ್ತಕಗಳ ಪ್ರದರ್ಶನ ಕೂಡ ಏರ್ಪಡಿಸಲಾಗಿದೆ.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಮತ್ತು ಇತರರು ಭಾಗವಹಿಸಿದ್ದರು.

ಈ ಸಂಜೆ
ಮಂಗಳವಾರ, 06 ಅಕ್ಟೋಬರ್, 2009



ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಗಾಂಧಿ ಜಯಂತಿ ಹಾಗೂ ವಿಶ್ವ ಅಹಿಂಸಾ ದಿನಾಚರಣೆಯಲ್ಲಿ ಗಾಂಧೀಜಿಯವರ ಜೀವನ ಸಂದೇಶ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿನಿ ಜಿ.ಹೇಮಾವತಿಗೆ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಪ್ರಶಸ್ತಿ ಪತ್ರ ನೀಡಿದರು. ಗಾಂಧಿ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

# ಗಾಂಧಿ ಭವನಕ್ಕೆ ಮಂಜೂರಾತಿ: ಸಿಎಂ ಭರವಸೆ

ಬೆಂಗಳೂರು: ಗಾಂಧೀ ಸ್ಮಾರಕ ಭವನ ನಿರ್ಮಾಣದ ಅಂದಾಜು ವೆಚ್ಚ ಮತ್ತು ಯೋಜನೆ ಸಲ್ಲಿಸಿದರೆ ಸರ್ಕಾರದಿಂದ ಮಂಜೂರಾತಿ ಒದಗಿಸುವುದಾಗಿ ಮುಖ್ಯಮಂತ್ರಿ ಯಡಿಯೂರಪ್ಪ ಹೇಳಿದ್ದಾರೆ.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಗಾಂಧೀ ಶಾಂತಿ ಪ್ರತಿಷ್ಠಾನ ಹಾಗೂ ನೆಹರು ಯುವಕ ಕೇಂದ್ರ, ನಗರದ ಗಾಂಧೀ ಭವನದಲ್ಲಿ ಏರ್ಪಡಿಸಿದ್ದ ಗಾಂಧೀ ಜಯಂತಿ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು.

ಗಾಂಧೀ ಭವನದ ವಾರ್ಷಿಕ ನಿರ್ವಹಣೆಯನ್ನು ಬಿಡಿಎಗೆ ವಹಿಸಬೇಕು. ಖಾದೀ ಬಟ್ಟೆ ಬಳಕೆಯನ್ನು ವ್ಯಾಪಕವಾಗಿಸಲು ರಾಜ್ಯದ ಎಲ್ಲಾ ಶಾಲೆಗಳಲ್ಲಿ ವಾರಕ್ಕೆರಡು ದಿನ ಮಕ್ಕಳು ಖಾದಿ ಬಿಳಿ ಉಡುಪು ಧರಿಸುವುದನ್ನು ಕಡ್ಡಾಯ ಗೊಳಿಸಬೇಕು. ಗಾಂಧೀ ವಿಚಾರಧಾರೆಗಳ ಬಗ್ಗೆ ಇಂದಿನ ಮಕ್ಕಳಿಗೆ ತಿಳಿಸಲು ಸುಸಜ್ಜಿತವಾದ ಮೊಬೈಲ್ ವ್ಯಾನ್ ನೀಡಬೇಕೆನ್ನುವ ಗಾಂಧೀ ಭವನದ ಅಧ್ಯಕ್ಷ ಡಾ।ಹೊ.ಶ್ರೀನಿವಾಸಯ್ಯ ಅವರ ಬೇಡಿಕೆಗಳನ್ನೂ ಪರಿಗಣಿಸುವುದಾಗಿ ಮುಖ್ಯಮಂತ್ರಿಗಳು ಭರವಸೆ ನೀಡಿದರು.

> ವಾರಕ್ಕೆರಡು ದಿನ ಮಕ್ಕಳು ಖಾದಿ ಬಿಳಿ ಉಡುಪು ಧರಿಸುವುದನ್ನು ಕಡ್ಡಾಯ ಗೊಳಿಸಲು ಪರಿಶೀಲನೆ ನಡೆಸಲಾಗುವುದು.
> ● ಯಡಿಯೂರಪ್ಪ

ಸ್ವಾತಂತ್ರ್ಯ ಪೂರ್ವದಲ್ಲಿ ದೇಶಕ್ಕಾಗಿ ನಾನು ಎಂಬ ಸ್ಥಿತಿಯಿತ್ತು. ಈಗ ದೇಶವಿರುವುದೇ ನನಗಾಗಿ ಎಂದು ರಾಜಕಾರಣಿಗಳು ದೇಶವನ್ನು ಲೂಟಿ ಮಾಡುತ್ತಿದ್ದಾರೆ ಎಂದು ಟೀಕಿಸಿದರು.

ಕಾರ್ಯಕ್ರಮದಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನದ ಗೌರವ ಅಧ್ಯಕ್ಷ ಡಾ। ವೊಡೆ.ಪಿ.ಕೃಷ್ಣ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ।ಹೆಚ್.ಆರ್.ದಾಸೇಗೌಡ ಭಾಗವಹಿಸಿದ್ದರು.



ನಗರದ ಗಾಂಧಿ ಭವನದಲ್ಲಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರಿಂದ ಗಾಂಧಿ ಜಯಂತಿ ಪ್ರಯುಕ್ತ ಮಹಾತ್ಮಗಾಂಧೀಜಿ ಪ್ರತಿಮೆಗೆ ಪುಷ್ಪಾರ್ಚನೆ.



ಗಾಂಧೀಜಿ ಪ್ರತಿಮೆಗೆ ಮಕ್ಕಳಿಂದ ಪುಷ್ಪವೃಷ್ಟಿ



ಮಕ್ಕಳಿಂದ ಚರಕ ಚಾಲನೆ.



ಬಿಡಿಎಸ್ ಕಚೇರಿಯಲ್ಲಿ ಗಾಂಧಿ ಜಯಂತಿ.

ಕನ್ನಡಪ್ರಭ, ಗುರುವಾರ, 1 ಅಕ್ಟೋಬರ್ 2009

# ಸಂಸ್ಕೃತ ಶಿಬಿರ

ಶೇಷಾದ್ರಿಪುರ ಸಂಜೆ ಪದವಿ ಕಾಲೇಜಿನಲ್ಲಿ ಹಮ್ಮಿಕೊಂಡ ಸಂಸ್ಕೃತ ಸಂಭಾಷಣಾ ಮತ್ತು ವೇದ ತರಗತಿಗಳ ಉದ್ಘಾಟನೆಯಲ್ಲಿ ಪಾಲ್ಗೊಂಡ ಶತಾವಧಾನಿ ಡಾ। ಆರ್.ಗಣೇಶ್, ಡಾ। ವೂಡೇ ಪಿ.ಕೃಷ್ಣ, ಪ್ರೊ. ಗಾಂಧೀ ಡಿ.ಪ್ರಭು, ಪ್ರೊ. ಸಿ.ಎಲ್.ಬಸವರಾಜಯ್ಯ, ಪ್ರೊ. ಎಸ್.ಹೆಗಡೆ ಮತ್ತಿತರರು.



ಉದಯವಾಣಿ

ನಮ್ಮ ಬೆಂಗಳೂರು

ಸೆಪ್ಟೆಂಬರ್ 22, 2009

## ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು : ದಿ ಇನ್‌ಸ್ಟಿಟ್ಯೂಷನ್ ಆಫ್ ಇಂಜಿನಿಯರ್‍ಸ್

# ಕರ್ನಾಟಕ ಕೇಂದ್ರದ ಸಾಧನೆಗಳು



## ಬೆಂಗಳೂರು ಇತಿಹಾಸ ಮಾಲೆ

sureshmoona@gmail.com

ಇದೇ ಸೆಪ್ಟೆಂಬರ್ 15 ರಂದು ಐಇಐ ಕರ್ನಾಟಕ ಕೇಂದ್ರವು ಇಂಜಿನಿಯರ್‍ಸ್ ದಿನಾಚರಣೆಯ ಕಾರ್ಯಕ್ರಮವನ್ನು ಅರ್ಥಪೂರ್ಣವಾಗಿ ಆಚರಿಸಿತು. ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪನವರು ಸರ್.ಎಂ.ವಿ ಅವರ ಕಂಚಿನ ಪ್ರತಿಮೆಯನ್ನು ಅನಾವರಣಗೊಳಿಸಿ ಕಾರ್ಯಬಾರದ ಒತ್ತಡದಿಂದ ತೆರಳಿದರು. ಮಾಹಿತಿ ತಂತ್ರಜ್ಞಾನದ ಸಚಿವರಾದ ಕೆ.ಎಸ್.ನಾಯ್ಡು, ಲೋಕೋಪಯೋಗಿ ಇಲಾಖೆ ಸಚಿವ ಸಿ.ಎಂ.ಉದಾಸಿ ಹಾಗೂ ಈ ಸಂಸ್ಥೆಯ ಸದಸ್ಯರು, ಆಹ್ವಾನಿತರೂ ಸೇರಿದಂತೆ 400ಕ್ಕೂ ಹೆಚ್ಚು ಜನರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಸರ್.ಎಂ.ವಿ ಅವರ ಬಗ್ಗೆ ಒಂದು ಪುಸ್ತಕವನ್ನು ಬಿಡುಗಡೆ ಮಾಡಲಾಯಿತು. ಕಾರ್ಯಕ್ರಮದ ಮುಖ್ಯ ಅಂಗವಾಗಿ ಹಿರಿಯ ವಿಜ್ಞಾನಿ ಪ್ರೊ.ಜೆ. ಶ್ರೀನಿವಾಸನ್ ಅವರು ಸರ್.ಎಂ.ವಿ ಸ್ಮಾರಕ ಉಪನ್ಯಾಸ ನೀಡಿ ಬೆಂಗಳೂರಿನ ಉಷ್ಣತೆ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಾಗಲು ಮುಖ್ಯವಾಗಿ ಗಾಜಿನ ಮೇಲ್ಮೈನ ಕಾಂಕ್ರೀಟ್ ಕಟ್ಟಡಗಳೇ ಕಾರಣ ಎಂದರಲ್ಲದೆ ಭೂಮಿಯ ಉಷ್ಣತೆಯು ಕ್ರಮೇಣ ಏರುತ್ತಲಿದ್ದು, ಇದರ ಪರಿಣಾಮವಾಗಿ ಸಮುದ್ರ ತೀರದ ನಗರಗಳು ನೀರುಪಾಲಾಗಲಿವೆ ಎಂದು ಎಚ್ಚರಿಸಿದರು.

ಐಇಐನ ಕರ್ನಾಟಕಕೇಂದ್ರವುಮೊದಲಿನಿಂದಲೂ ನಮ್ಮ ರಾಜ್ಯದ ಅಭಿವೃದ್ಧಿಗೆ ಪೂರಕವಾದ ಯೋಜನೆಗಳನ್ನು ಕೈಗೊಳ್ಳುತ್ತಾ ಬಂದಿದೆ. ಬಿ.ಇ.ಎಂ.ಎಲ್, ಹೆಚ್.ಎ.ಎಲ್, ಎನ್.ಎ.ಎಲ್, ಎನ್.ಜಿ.ಇ.ಎಫ್ ನಂತಹ ಕೇಂದ್ರ ಹಾಗೂ ರಾಜ್ಯದ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸುವಲ್ಲೂ ಈ ಕೇಂದ್ರವು ಪ್ರಮುಖ ಪಾತ್ರವಹಿಸಿದೆ. ಇಲ್ಲಿನ ಮಾನವ ಸಂಪನ್ಮೂಲ ಹಾಗು ಕೆಲವು ಮೂಲಭೂತ ಸೌಲಭ್ಯಗಳು ರಾಜ್ಯ ಸರ್ಕಾರವು ಹಲವಾರು ಪ್ರಗತಿಪರ ಯೋಜನೆಗಳನ್ನು ಕೈಗೊಳ್ಳಲು ಬುನಾದಿಯನ್ನು ಒದಗಿಸಿವೆ. ಸರ್ಕಾರದ ವಿವಿಧ ಇಲಾಖೆಗಳಲ್ಲಿದ್ದ ಇಂಜಿನಿಯರ್‌ಗಳು ಈ ಸಂಸ್ಥೆಯ ಸದಸ್ಯರೂ ಆಗಿದ್ದುದು ಸರ್ಕಾರ ಮತ್ತು ಈ ಸಂಸ್ಥೆ ಪರಸ್ಪರ ಪೂರಕವಾಗಿ ಕಾರ್ಯನಿರ್ವಹಿಸಲು ಅನುಕೂಲವಾಯಿತು. ಅಷ್ಟೇ ಅಲ್ಲದೆ ಈ ಕೇಂದ್ರವು ಪ್ರಶಸ್ತಿ ಪ್ರದಾನ, ಉಪನ್ಯಾಸ, ವಿಚಾರ ಸಂಕಿರಣ, ತಂತ್ರಜ್ಞಾನ ಸಮಾವೇಶ ಮುಂತಾದ ಕಾರ್ಯಕ್ರಮಗಳನ್ನು ಅತ್ಯಂತ ವ್ಯವಸ್ಥಿತವಾಗಿಯೂ ಸಮರ್ಪಕವಾಗಿಯೂ ನಿರ್ವಹಿಸುವಲ್ಲಿ ರಾಷ್ಟ್ರಮಟ್ಟದಲ್ಲೂ ಹೆಸರುವಾಸಿಯಾಗಿದೆ. ಹಲವಾರು ಖಾಸಗಿ ಕೈಗಾರಿಕಾ ಸಂಸ್ಥೆಗಳ ಆರ್ಥಿಕ ನೆರವಿನೊಂದಿಗೆ ಪ್ರಾರಂಭಿಸಿರುವ ಸಂಶೋಧನೆ ಮತ್ತು ಸಮಾಲೋಚನೆ ಕೇಂದ್ರವು ಕೈಗಾರಿಕಾ ಕ್ಷೇತ್ರಕ್ಕೆ ಅನುಪಮ ಸೇವೆ ಸಲ್ಲಿಸಿರುವುದಲ್ಲದೆ ಹಾಸನ, ಗುಲ್ಬರ್ಗ, ಬೀದರ್ ಜಿಲ್ಲೆಗಳಲ್ಲಿ ಆರ್ಥಿಕ ಸಮೀಕ್ಷೆಯನ್ನು ನಡೆಸಿಕೊಟ್ಟಿವೆ. ಹಾಗೆಯೇ ಮಲಪ್ರಭ, ಘಟಪ್ರಭ ಪ್ರದೇಶದಲ್ಲಿ ಇದು ನಡೆಸಿರುವ ಅಂತಹ ಒಂದು ಸಮೀಕ್ಷೆ ಈಗ ರಾಜ್ಯ ಸರ್ಕಾರದ ಅವಗಾಹನೆಯಲ್ಲಿದೆ.

ಈ ಕೇಂದ್ರವು ಆಗಾಗ್ಗೆ ರಾಜ್ಯ ಹಾಗೂ ರಾಷ್ಟ್ರಮಟ್ಟದ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರಿಂದ ಅದಕ್ಕೆ ಅನುಗುಣವಾದ ಸುಸಜ್ಜಿತ ಸಭಾಂಗಣವೊಂದು ಇರಬೇಕೆಂದು ನಿರ್ಧರಿಸಿ ಈ ಕಟ್ಟಡದಲ್ಲಿಯೇ ನಿರ್ಮಿಸಿದ ಕಾನ್‌ಫರೆನ್ಸ್ ಹಾಲ್‌ಅನ್ನು 1978ರ ನವೆಂಬರ್




ಇಂಜಿನಿಯರ್ಸ್ ದಿನಾಚರಣೆ

3 ರಂದು ಆಗಿನ ರಾಜ್ಯಪಾಲ ಗೋವಿಂದ ನಾರಾಯಣ ಉದ್ಘಾಟಿಸಿದ್ದಾರೆ. 1979ರ ಜನವರಿ 7 ರಂದು ಈ ಕೇಂದ್ರವು 49ನೇ ವಾರ್ಷಿಕ ಅಧಿವೇಶನವನ್ನು ವಿಧಾನ ಸೌಧದಲ್ಲಿ ವಿ.ಹೆಚ್.ಆರ್. ನಾಯ್ಡು ಅವರ ಅಧ್ಯಕ್ಷತೆಯಲ್ಲಿ ನಡೆಸಿತು. ಇದನ್ನು ದೇಶದ ಆಗಿನ ಉಪರಾಷ್ಟ್ರಪತಿ ಬಿ.ಡಿ. ಜತ್ತಿಯವರೇ ಉದ್ಘಾಟಿಸಿದರು. ನಮ್ಮ ರಾಜ್ಯದ ಮುಖ್ಯಮಂತ್ರಿ ದೇವರಾಜ ಅರಸು ಅವರು ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಈ ಸಮಾವೇಶದಲ್ಲಿ ಭಾವಿ ಇಂಜಿನಿಯರ್‌ಗಳ ಶಿಕ್ಷಣ ಸ್ವರೂಪ ಎಂಬ ವಿಷಯದ ಬಗ್ಗೆ 3 ದಿನಗಳ ವಿಚಾರ ಸಂಕಿರಣ, ನಾಡಿನ ಪ್ರಮುಖ ವಿಜ್ಞಾನಿಗಳಿಂದ ಸರ್.ಎಂ.ವಿ, ಬಾಯಿಖಾಕ, ನಿಧಿ ಭೂಷಣ್ ಸ್ಮಾರಕ ಉಪನ್ಯಾಸಗಳು ಹಾಗೂ ವರ್ಲ್ಡ್ ಎನರ್ಜಿ ಸಮಾವೇಶದ ಬಗ್ಗೆ ಸಮಾಲೋಚನೆ, ಈ ಕಾರ್ಯಕ್ರಮಗಳು ನಡೆದವು.

1985-95ರ ದಶಕದಲ್ಲಿಈ ಕೇಂದ್ರದಲ್ಲಿನಡೆದಅತ್ಯಂತ ಮಹತ್ವಪೂರ್ಣ ಕಾರ್ಯಕ್ರಮವೇ ವಜ್ರಮಹೋತ್ಸವ ಆಚರಣೆ. 1995 ಜೂನ್ 17ರಂದು ಪುಟ್ಟಣ್ಣಚೆಟ್ಟಿ ಪುರಭವನದಲ್ಲಿ ಈ ಸಮಾರಂಭದ ಉದ್ಘಾಟನೆ ನಡೆದು ಮಾನವ ಸಂಪನ್ಮೂಲ ಇಲಾಖೈ ಕೇಂದ್ರ ಸಚಿವ ಮಾಧವರಾವ್ ಸಿಂಧ್ಯ ಅದನ್ನು ನೆರವೇರಿಸಿ ಇಂಜಿನಿಯರ್‌ಗಳು ರಾಜ್ಯ ಹಾಗೂ ದೇಶದ ಪ್ರಗತಿಗೆ ಪೂರಕವಾದ ಅತ್ಯವಶ್ಯಕ ಬದಲಾವಣೆಯನ್ನು ತರುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ ಎಂದು ಶ್ಲಾಘಿಸಿದರು. ಆಗಿನ ಮುಖ್ಯ ಮಂತ್ರಿ ಎಚ್.ಡಿ.ದೇವೇಗೌಡ ಮುಖ್ಯ ಅತಿಥಿಯಾಗಿ ಭಾಗವಹಿಸಿ ಈ ಕೇಂದ್ರವು ರಾಜ್ಯದ ಬೆಳವಣಿಗೆಗೆ ನೀಡಿರುವ ಕೊಡುಗೆಯನ್ನು ಪ್ರಶಂಸಿಸಿದರು. ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳ ಆಗಿನ ರಾಜ್ಯ ಸಚಿವ ಆರ್.ವಿ. ದೇಶಪಾಂಡೆಯವರು ಇದು ನಮ್ಮೆಲ್ಲರ ಹೆಮ್ಮೆಯ ಸಂಸ್ಥೆ ಎಂದರು. ಪ್ರಾಸ್ತಾವಿಕ ಭಾಷಣ ಮಾಡಿದವರು ಖ್ಯಾತ ವಿಜ್ಞಾನಿ ಪ್ರೊ.ಯು.ಆರ್.ರಾವ್. ಗೌರವಾನ್ವಿತ ಅತಿಥಿಯಾಗಿದ್ದವರು ಐಇಐನ ಅಧ್ಯಕ್ಷ ಪಿ.ಎಂ.ಚಾಕೊ. ಇದಲ್ಲದೆ ಕರ್ನಾಟಕ ಕೇಂದ್ರದ ಚೆರ್ಮನ್ ಆಗಿದ್ದ ಡಿ.ವಿ.ನಾಗಭೂಷಣ್ ಅವರು ಈ ಕೇಂದ್ರದ ಕಟ್ಟಡ ನಿರ್ಮಾಣದಲ್ಲಿ ಪ್ರೊ.ಎನ್.ಎಸ್.ಗೋವಿಂದ ರಾವ್, ಬಿ.ಆರ್.ಮಾಣಿಕ್ಯಂ ಮುಂತಾದವರು ವಹಿಸಿರುವ ಪಾತ್ರವನ್ನು ಸಭಿಕರಿಗೆ ತಿಳಿಸಿಕೊಟ್ಟರು. ಒಂದು ವಾರದ ವೈವಿಧ್ಯಮಯ ಕಾರ್ಯಕ್ರಮಗಳ ನಂತರ ಜೂನ್ 24 ರಂದು ಸಮಾರೋಪ ಸಮಾರಂಭವನ್ನು ನಡೆಸಲಾಯಿತು. ನಮ್ಮ ರಾಜ್ಯದ ಮಾಜಿ ಮುಖ್ಯಮಂತ್ರಿಗಳು, ಆಗಿನ ಪ್ಲಾನಿಂಗ್ ಕಮಿಷನ್‌ನ ಡೆಪ್ಯುಟಿ ಚೇರ್ಮನ್ ಆಗಿದ್ದ ರಾಮಕೃಷ್ಣ ಹೆಗಡೆಯವರು ಮುಖ್ಯ ಅತಿಥಿಗಳಾಗಿಯೂ, ವಿಧಾನಸೌಧದ ಸ್ಪೀಕರ್ ರಮೇಶ್ ಕುಮಾರ್ ಅಧ್ಯಕ್ಷತೆ ವಹಿಸಿಯೂ ಭಾಗವಹಿಸಿದ್ದರು. ಪ್ರಾಸ್ತಾವಿಕ ಭಾಷಣವನ್ನು ಖ್ಯಾತ ವಿಜ್ಞಾನಿ ಡಾ.ಕೋಟಾ ಹರಿನಾರಾಯಣ ನೀಡಿದ್ದರು. ಐಇಐನ ಅಧ್ಯಕ್ಷ ಪಿ.ಎಂ.ಚಾಕೊ ಗೌರವಾನ್ವಿತ ಅತಿಥಿಯಾಗಿದ್ದರು. ವಜ್ರಮಹೋತ್ಸವದ ಅಂಗವಾಗಿ ಆಯೋಜಿಸಿದ ವಸ್ತುಪ್ರದರ್ಶನಕ್ಕೆ ಇಂಜಿನಿಯರ್‌ಗಳಷ್ಟೇ ಅಲ್ಲದೆ ಹೆಚ್ಚಿನ ಸಂಖ್ಯೆಯಲ್ಲಿ ಸಾರ್ವಜನಿಕರೂ ಆಗಮಿಸಿದ್ದರು.

ಇದಾದ ಮರುವರ್ಷವೇ ಈ ಕೇಂದ್ರವುಐಇಐನ 11ನೇ ಇಂಡಿಯನ್ ಇಂಜಿನಿಯರ್ಸ್ ಕಾಂಗ್ರೆಸ್‌ಅನ್ನು ಯಶಸ್ವಿಯಾಗಿ ನಿರ್ವಹಿಸಿತು. 1991ರ ಡಿಸೆಂಬರ್ 21ರಂದು ಚೌಡಯ್ಯ ಮೆಮೋರಿಯಲ್ ಹಾಲ್‌ನಲ್ಲಿ ಆರಂಭವಾದ ಈ ಕಾರ್ಯಕ್ರಮವನ್ನು ಉದ್ಘಾಟಿಸಿದ ಖ್ಯಾತ ಅಣುವಿಜ್ಞಾನಿ ಡಾ. ರಾಜಾರಾಮಣ್ಣ ಅವರು ಶಿಕ್ಷಣ ಕ್ಷೇತ್ರದಲ್ಲಿ ಗುರುತರವಾದ ಜವಾಬ್ದಾರಿಯನ್ನು ಕೈಗೊಳ್ಳಲು ಸಮರ್ಪಕ ಶಿಕ್ಷಕರನ್ನು ಆಯ್ಕೆ ಮಾಡುವಲ್ಲಿ ಗುಣಮಟ್ಟವೇ ಏಕೈಕ ಮಾನದಂಡವಾಗಿರಬೇಕು ಎಂದು ಅಭಿಪ್ರಾಯ ಪಟ್ಟರಲ್ಲದೆ ಸ್ಮರಣ ಸಂಚಿಕೆಯನ್ನೂ ಸಹ ಬಿಡುಗಡೆ ಮಾಡಿದರು. ಐಇಐನ ಆಗಿನ ಅಧ್ಯಕ್ಷ ಕೆ.ವಿ. ಚೌಬಲ್ ಅವರು ಗ್ರಾಮೀಣ ಅಭಿವೃದ್ಧಿ ಹಾಗೂ ತಾಂತ್ರಿಕ ಜ್ಞಾನವನ್ನು ಜನಪ್ರಿಯಗೊಳಿಸುವಲ್ಲಿ ಈ ಸಂಸ್ಥೆಯು ಕೈಗೊಂಡಿರುವ ಯೋಜನೆಗಳ ಪರಿಚಯವನ್ನು ನೀಡಿದರು. ಈ ಸಂಬಂಧವಾಗಿ ಏರ್ಪಡಿಸಿದ್ದ ಇಂಡಿಯಾ 2010 ವಸ್ತುಪ್ರದರ್ಶನವನ್ನು ರಾಜ್ಯಪಾಲ ಖುರ್ಶಿದ್ ಆಲಂ ಖಾನ್ ಉದ್ಘಾಟಿಸಿದರು. ಈ ಸಮಾವೇಶದ ಸಮಾರೋಪ ಸಮಾರಂಭದಲ್ಲಿ ಬೆಂಗಳೂರು ವಿ.ವಿದ ಉಪಕುಲಪತಿ ಪ್ರೊ.ಎನ್.ಆರ್. ಶೆಟ್ಟಿ ಅತಿಥಿಗಳಾಗಿ ಭಾಗವಹಿಸಿದ್ದರು.

■ ಮುಂದುವರಿಯುವುದು

ಕನ್ನಡಪ್ರಭ, ಮಂಗಳವಾರ, 15 ಸೆಪ್ಟೆಂಬರ್ 2009

## ವಿಕಸನ ಶಿಬಿರ



ಶೇಷಾದ್ರಿಪುರ ಸಂಜೆ ಪದವಿ ಕಾಲೇಜಿನಲ್ಲಿ ನಡೆದ ವಿದ್ಯಾರ್ಥಿ ವಿಕಸನ ಶಿಬಿರದಲ್ಲಿ ಪ್ರೊ।ಎನ್.ಬೈರೇಗೌಡ, ಡಾ।ವೂಡೇ ಪಿ.ಕೃಷ್ಣ, ಡಾ।ವಸಂತ್ ಕುಮಾರ್, ಎಸ್.ವೀರಭದ್ರಯ್ಯ, ಡಾ।ಸಿ.ಆರ್.ಚಂದ್ರಶೇಖರ್ ಪಾಲ್ಗೊಂಡಿದ್ದರು.

ಪ್ರಜಾವಾಣಿ

ಭಾನುವಾರ 13ನೇ ಸೆಪ್ಟೆಂಬರ್ 2009

# ಯಲಹಂಕ: 'ದೀಕ್ಷಾ' ವಿದ್ಯಾರ್ಥಿ ವೇದಿಕೆ ಉದ್ಘಾಟನೆ

ಯಲಹಂಕ: 'ವಿಜ್ಞಾನ ಮತ್ತು ವೈದ್ಯಕೀಯ ಶಿಕ್ಷಣದ ಕಡೆಗೆ ಇಂದಿನ ವಿದ್ಯಾರ್ಥಿಗಳು ಹೆಚ್ಚಿನ ಒಲವು ತೋರುತ್ತಿರುವುದರಿಂದ ಅವರಲ್ಲಿ ಮಾನವೀಯತೆ ಹಾಗೂ ಸಮಾಜ ಮುಖಿ ಚಿಂತನೆ ಕಡಿಮೆಯಾಗುತ್ತಿದೆ' ಎಂದು ಶಾಸಕ ಕೃಷ್ಣ ಬೈರೇಗೌಡ ಆತಂಕ ವ್ಯಕ್ತಪಡಿಸಿದರು.

ಇಲ್ಲಿನ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ 'ದೀಕ್ಷಾ' ವಾಣಿಜ್ಯ ಮತ್ತು ಮ್ಯಾನೇಜ್‌ಮೆಂಟ್ ವಿದ್ಯಾರ್ಥಿಗಳ ವೇದಿಕೆಯನ್ನು ಉದ್ಘಾಟಿಸಿ ಮಾತನಾಡಿದರು.

'ಶಿಕ್ಷಣ ಎಂದರೆ ಹೆಚ್ಚು ಅಂಕ ಗಳಿಸಿ, ಪದವಿಗಳನ್ನು ಪಡೆಯುವುದಲ್ಲ. ಇದರ ಜೊತೆಗೆ ವ್ಯಕ್ತಿತ್ವ ವಿಕಸನದತ್ತ ಕೂಡ ಗಮನ ಹರಿಸಬೇಕು. ಎಲ್ಲ ವಿಷಯಗಳಲ್ಲಿ ಬಗ್ಗೆ ಅರಿತಾಗ ಮಾತ್ರ ಸ್ವಾಸ್ಥ ಸಮಾಜ ನಿರ್ಮಾಣ ಸಾಧ್ಯ' ಎಂದು ಅವರು ಹೇಳಿದರು.

'ದೇಶದಲ್ಲಿ ಶಿಕ್ಷಣ ವ್ಯವಸ್ಥೆಗೆ ಸಂಬಂಧಪಟ್ಟಂತೆ ಹೊಸ ಆಲೋಚನೆ ಆರಂಭವಾಗಬೇಕಾಗಿದೆ. ಶಿಕ್ಷಣದ ಅರ್ಥವನ್ನು ಸೀಮಿತಗೊಳಿಸಿರುವ ಮನೋಭಾವದಿಂದ ಹೊರಬರಬೇಕಿದೆ. ವಿದ್ಯಾರ್ಥಿಗಳು ತಮ್ಮ ಜವಾಬ್ದಾರಿಯನ್ನು ಅರಿತು ದೇಶ ಸೇವೆಗೆ ಮುಂದಾಗುವಂತೆ ಮಾಡುವಲ್ಲಿ ಶಿಕ್ಷಣ ಸಂಸ್ಥೆಗಳ ಪಾತ್ರ ಮುಖ್ಯವಾಗಿದೆ' ಎಂದರು.

ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮಾತನಾಡಿ, 'ವಿದ್ಯಾರ್ಥಿಗಳು ಕಾಲಹರಣ ಮಾಡದೇ ಇರುವ ಸಮಯವನ್ನು ಸಮರ್ಪಕವಾಗಿ ಬಳಸಿಕೊಂಡು ಗುರಿ ಮುಟ್ಟಬೇಕು' ಎಂದು ಕಿವಿಮಾತು ಹೇಳಿದರು.

ಪ್ರಾಂಶುಪಾಲ ಡಾ.ಎಂ.ಪ್ರಕಾಶ್, ಉಪ ಪ್ರಾಂಶುಪಾಲ ಏಕಾಂಬರೇಶ್, ಬಿಬಿಎಂ ಹಾಗೂ ವಾಣಿಜ್ಯ ವಿಭಾಗದ ಮುಖ್ಯಸ್ಥ ವೆಂಕಟೇಶ್ ಮತ್ತಿತರರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.



ಯಲಹಂಕದಲ್ಲಿರುವ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ಏರ್ಪಡಿಸಲಾಗಿದ್ದ 'ದೀಕ್ಷಾ' ವಾಣಿಜ್ಯ ಮತ್ತು ಮ್ಯಾನೇಜ್‌ಮೆಂಟ್ ವಿದ್ಯಾರ್ಥಿ ವೇದಿಕೆಯನ್ನು ಶಾಸಕ ಕೃಷ್ಣ ಬೈರೇಗೌಡ ಉದ್ಘಾಟಿಸಿದರು. ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಡಾ.ಎಂ.ಪ್ರಕಾಶ್ ಇತರರು ಚಿತ್ರದಲ್ಲಿದ್ದಾರೆ.

ಈ ಸಂಜೆ

ಭಾನುವಾರ, 13 ಸೆಪ್ಟೆಂಬರ್ 2009



ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ವಿದ್ಯಾರ್ಥಿ ವಿಕಸನ ಶಿಬಿರವನ್ನು ಪ್ರಾಂಶುಪಾಲ ಬೈರೇಗೌಡ ಉದ್ಘಾಟಿಸಿದರು. ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ ಡಾ.ವಸಂತ್‌ಕುಮಾರ್, ಎಸ್.ವೀರಭದ್ರಯ್ಯ, ಡಾ.ಸಿ.ಆರ್.ಚಂದ್ರ ಶೇಖರ್ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ | ಶುಕ್ರವಾರ, 11 ಸೆಪ್ಟೆಂಬರ್ 2009 | ಬೆಂಗಳೂರು




ಬೆಂಗಳೂರಿನಲ್ಲಿ ಶ್ರೀ ನಂಜಾವಧೂತ ಸೇವಾ ಸಮಿತಿ, ಕುಂಚ ಪ್ರತಿಷ್ಠಾನ ಇತ್ತೀಚೆಗೆ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಪ್ರತಿಭಾ ಪುರಸ್ಕಾರ ಪಡೆದ ವಿದ್ಯಾರ್ಥಿಗಳೊಂದಿಗೆ ಶ್ರೀ ನಂಜಾವಧೂತ ಸ್ವಾಮೀಜಿ, ಸಮಾಜದ ಮುಖಂಡರಾದ ಟಿ.ಬಿ.ಜಯಚಂದ್ರ, ವೀರಭದ್ರಯ್ಯ, ಎಂ.ನೀಲಯ್ಯ, ಎಂ.ಎಸ್. ರವಿಶಂಕರ್, ಸಿ.ಪಿ.ಮೂಡಲಗಿರಿಯಪ್ಪ ಚಿಕ್ಕಣ್ಣ ಪೂಡೆ ಪಿ.ಕೃಷ್ಣ ಮಮತಾ ಆರ್. ಮತ್ತಿತರರು.

ನಾಡು ನುಡಿಯ ಹಿತರಕ್ಷಣೆಯಲ್ಲಿ 37ವರ್ಷಗಳು
ಪ್ರತಿ ತಿಂಗಳು 10 ಮತ್ತು 25 ರಂದು ಪ್ರಕಟಣೆ

RNI No.20142/71
Regd. No. CPMG/KA/BGW-63/2009-11
Licenced to Post without Prepayment Licence No.Wpp (W)-24
Posted on 12th & 27th of every Month at City Market Post office, Bangalore.

# ರಾಜ್ಯಪ್ರಗತಿ

ಬೆಲೆ ರೂ. 8-00 | 10-9-2009 | ಪುಟ 12

## ಹಿರಿಯ ಸಾಹಿತಿ, ಪತ್ರಕರ್ತ

# ಜಾಣಗೆರೆ ವೆಂಕಟರಾಮಯ್ಯನವರಿಗೆ 'ಅರಸು ಶ್ರೀ' ಪ್ರಶಸ್ತಿ ಪ್ರದಾನ



ಜಾಣಗೆರೆ ಅವರಿಗೆ ಪ್ರಶಸ್ತಿ ಪ್ರದಾನ: ಚಿತ್ರದಲ್ಲಿ (ಎ-ಬ) : ಉಷಾಲಕ್ಷ್ಮಿ ಶ್ರೀನಾಥ್, ಮಧುರಾ ಅಶೋಕಕುಮಾರ್, ಗುರುದೇವ ನಾರಾಯಣಕುಮಾರ್, ರು.ಬಸಪ್ಪ, ಟಿ.ಪಿ.ಪ್ರಸನ್ನಕುಮಾರ್, ಸಿ.ಕೆ.ರಾಮೇಗೌಡ, ಡಾ.ವೂಡೆ ಪಿ.ಕೃಷ್ಣ ಮತ್ತು ಮಧು ಬಿಲ್ಲಿನಕೋಟೆ ಇದ್ದಾರೆ.



ಪ್ರೊ. ಪಿ.ಸದಾಶಿವ ಅವರ ಅಧ್ಯಕ್ಷ ಭಾಷಣ.

ಅರಸು ವಿಚಾರ ವೇದಿಕೆ ಆಶ್ರಯದಲ್ಲಿ ಇತ್ತೀಚೆಗೆ ಕನ್ನಡ ಭವನದಲ್ಲಿ ನಡೆದ ದೇವರಾಜ ಅರಸು ಅವರ 94ನೇ ಜನ್ಮದಿನೋತ್ಸವ ಹಾಗೂ ಹಿಂದುಳಿದ ವರ್ಗಗಳ ಜಾಗೃತಿ ದಿನಾಚರಣೆ ಕಾರ್ಯಕ್ರಮದಲ್ಲಿ ಹಿರಿಯ ಸಾಹಿತಿ, ಪತ್ರಕರ್ತ, ಅರಸು ವಿಚಾರವಾದಿ ಜಾಣಗೆರೆ ವೆಂಕಟರಾಮಯ್ಯನವರಿಗೆ 10,000ರೂಪಾಯಿಗಳ ನಗದನ್ನೊಳಗೊಂಡ "ಅರಸುಶ್ರೀ" ಪ್ರಶಸ್ತಿ ಪ್ರದಾನ ನೀಡಿ ಗೌರವಿಸಲಾಯಿತು. ನಾರಾಯಣರಾವ್ ಮಾನೆಯವರು ಅರಸು ಅವರಿಗೆ ಗೀತನಮನ ಸಲ್ಲಿಸುವುದರೊಂದಿಗೆ ಆರಂಭವಾದ ಕಾರ್ಯಕ್ರಮದ ನಿರೂಪಣೆ ಮಾಡಿದವರು:ಕುಸುಮ ಶ್ರೀಹರ್ಷ, ವೇದಿಕೆ ಅಧ್ಯಕ್ಷೆ ನಳಿನಿ ಮಹಾದೇವಸ್ವಾಮಿ ಸ್ವಾಗತಿಸಿದರು.

ಕಾರ್ಯಕ್ರಮ ಉದ್ಘಾಟಿಸಿದ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಗೌ.ಪ್ರಧಾನ ಕಾರ್ಯದರ್ಶಿ ಡಾ|| ವೂಡೆ ಪಿ.ಕೃಷ್ಣ ಅವರು ತಲೆಯ ಮೇಲೆ ಮಲಹೊರುವ ಪದ್ಧತಿಯನ್ನು ತಪ್ಪಿಸಿದ ಅರಸು ಒಬ್ಬ ಕ್ರಾಂತಿಕಾರಕ ವ್ಯಕ್ತಿ ಎಂದು ಬಣ್ಣಿಸಿದರು. ಅರಸು ಅವರ ತತ್ತ್ವಗಳನ್ನು ಬಾಳಿನಲ್ಲಳವಡಿಸಿಕೊಂಡಿರುವ ಜಾಣಗೆರೆ ವೆಂಕಟರಾಮಯ್ಯನವರಿಗೆ ಪ್ರಶಸ್ತಿ ನೀಡಿ ಪ್ರಶಸ್ತಿಯ ಘನತೆ ಹೆಚ್ಚಿಸಿದ್ದೀರಿ ಎಂದು ವೇದಿಕೆ ಕಾರ್ಯಕರ್ತರನ್ನು ಅಭಿನಂದಿಸಿದರು.

6ನೇ ಪುಟ ನೋಡಿ....

# ಹಿರಿಯ ಸಮಾಜ ಚಿಂತಕ

# ವೂಡೆ ಪಿ.ಕೃಷ್ಣರ ಕಿರೀಟಕ್ಕೆ ಡಾಕ್ಟರೇಟ್ ಗರಿ



ಶೇಷಾದ್ರಿಪುರ ಶಿಕ್ಷಣ ದತ್ತಿ ಗೌ. ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಶಿಕ್ಷಣ ತಜ್ಞರಷ್ಟೇ ಅಲ್ಲ, ಪ್ರಾಮಾಣಿಕ ಸಮಾಜ ಸೇವೆಯಲ್ಲಿ ಕಿರಿಯ ಪ್ರಾಯದಲ್ಲೇ ಅತ್ಯಂತ ದೊಡ್ಡ ಹೆಸರು ಮಾಡಿರುವ ವ್ಯಕ್ತಿ. ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ, ಕರ್ನಾಟಕ ಶಾಖೆಯ ಉಪಾಧ್ಯಕ್ಷರಾಗಿ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾಗಿ, ಭಾರತ ಸೇವಾದಳ ಕೇಂದ್ರ ಸಮಿತಿಯ ಗೌ.ಕೋಶಾಧ್ಯಕ್ಷರಾಗಿ, ಇಂಜಿನಿಯರುಗಳ ಸಂಸ್ಥೆ, ಕೊಲ್ಕತ್ತಾದ ಆಡಳಿತ ಮಂಡಳಿಯ ಸದಸ್ಯರಾಗಿ - ಹೀಗೆ ಅನೇಕಾನೇಕ ಸಂಸ್ಥೆಗಳಲ್ಲಿ ಮಾನವೀಯ ಕಾಳಜಿಯಿಂದ ನಿಷ್ಠಾಪೂರ್ಣವಾಗಿ ಸೇವೆ ಸಲ್ಲಿಸುತ್ತಿರುವ ವೂಡೆ ಪಿ.ಕೃಷ್ಣ ಅವರು ಇತ್ತೀಚೆಗೆ ದೆಹಲಿ ವಿ.ವಿ. ದಿಂದ ಡಾಕ್ಟರೇಟ್ ಪದವಿ ಪಡೆದು ತಮ್ಮ ಕಿರೀಟಕ್ಕೆ ಮತ್ತೊಂದು ಗರಿ ಏರಿಸಿಕೊಂಡಿದ್ದಾರೆ.

ಸೇವೆಗೆ ಮತ್ತೊಂದು ಹೆಸರಂತಿರುವ ವೂಡೆ ಪಿ.ಕೃಷ್ಣ ಅವರು "ಪತ್ರಿಕೆ"ಯ ಅಭಿಮಾನಿ ಓದುಗರು, ಮಹಾಪೋಷಕರು. ಅವರಿಗೆ "ಪತ್ರಿಕೆ"ಯ ಹಾರ್ದಿಕ ಅಭಿನಂದನೆಗಳು

- ಸಂ.

# ವಿಶ್ವ ಸಾಹಿತ್ಯಕ್ಕೆ ಕನ್ನಡದ ಕೊಡುಗೆ ವಚನ ಸಾಹಿತ್ಯ

## - ಸರ್ಪಭೂಷಣ ಮಠದಲ್ಲಿ ಡಾ.ಸಾ.ಶಿ.ಮರುಳಯ್ಯ

"ವಿಶ್ವ ಸಾಹಿತ್ಯಕ್ಕೆ ಕನ್ನಡದ ಮಹಾನ್ ಕೊಡುಗೆ ವಚನ ಸಾಹಿತ್ಯ. ಸಾವಿರಾರು ವಚನಗಳು ಅತ್ಯಂತ ವಿಚಾರಪೂರ್ಣವಾಗಿದ್ದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ. ಅಂತಹ ಸುಂದರ ವಚನಗಳ ಸಾಲಿಗೆ ಸೇರುವುದು ಜೇಡರ ದಾಸಿಮಯ್ಯನ ಈಶನ ಶರಣರು ವೇಶಿಯ ಹೋದರೆ ವಚನ. ಸ್ವಾಭಿಮಾನ ಪ್ರವೃತ್ತಿಯ, ಸ್ವತಂತ್ರ ಮನೋಭಾವದ ದಾಸಿಮಯ್ಯ ಪರಸ್ತ್ರೀಯರನ್ನು ದೇವತೆಯಂತೆ ಕಾಣಬೇಕು ಎಂದು ಆಶಿಸಿದ್ದಾನೆ. ವೇಶ್ಯಾವೃತ್ತಿಗೂ ಅತ್ಯಂತ ಗೌರವ ನೀಡಿದ್ದಾನೆ" ಎಂದು ಹಿರಿಯ ವಿದ್ವಾಂಸ ಡಾ.ಸಾ.ಶಿ.ಮರುಳಯ್ಯ ತಿಳಿಸಿದರು. ಬಸವ ಸಮಿತಿಯ ಆಶ್ರಯದಲ್ಲಿ ಸರ್ಪಭೂಷಣ ಮಠದ ವಿದ್ಯಾರ್ಥಿ ನಿಲಯದಲ್ಲಿ ೧೪-೮-೨೦೦೯ರಂದು ನಡೆದ ಮನೆಯಿಂದ ಮನೆಗೆ ಅರಿವಿನ ಮನೆ - ವಚನ ಶ್ರಾವಣ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಡಾ.ಸಾ.ಶಿ.ಮ. ಜೇಡರ ದಾಸಿಮಯ್ಯನ ಈಶನ ಶರಣರು ವೇಶಿಯ ಹೋದರೆ ವಚನದ ವ್ಯಾಖ್ಯಾನ ಮಾಡಿದರು. ಈ ವಚನಕ್ಕೆ ಪೂರಕವಾಗಿ ಅವರು ಅನೇಕ ವಚನಗಳನ್ನು ಉಲ್ಲೇಖಿಸಿದರು.

ರುದ್ರೇಶ್ ಅದರಂಗಿ ನಿರೂಪಿಸಿದ ಕಾರ್ಯಕ್ರಮ ಆರ್.ಎನ್.ಕಲ್ಯಾಣ ಶೆಟ್ಟಿ, ಮಧುಚೈತ್ರ ಮತ್ತು ಲಲಿತಮ್ಮನವರ ವಚನ ಗಾಯನದೊಂದಿಗೆ ಆರಂಭವಾಯಿತು. ಸರ್ಪಭೂಷಣ ಮಠ ಟ್ರಸ್ಟ್‌ನ ಅಧ್ಯಕ್ಷರಾದ ನಿ.ಐ.ಎ.ಎಸ್.ಅಧಿಕಾರಿ ಬಿ.ಎಸ್.ಮುದ್ದಪ್ಪ ಅಧ್ಯಕ್ಷತೆ ವಹಿಸಿದ್ದರು. ಬಸವ ಸಮಿತಿ ಉಪಾಧ್ಯಕ್ಷ ಎಚ್.ಎಸ್.ರೇಣುಕಪ್ರಸಾದ್ ಸ್ವಾಗತಿಸಿದರು.

ಬಸವಸಮಿತಿ ಅಧ್ಯಕ್ಷ ಅರವಿಂದಜತ್ತಿ ಮಾತನಾಡಿ, ಮನುಷ್ಯನಾಗಿ ಹಂದಿಯ ಕೆಲಸಗಳನ್ನು ಮಾಡಬಾರದು ಎಂದು ಈ ವಚನ ಸೂಚಿಸುತ್ತದೆ. ಸತ್ಯ ಹೇಳುವುದು ಮನುಷ್ಯತ್ವ, ಸುಳ್ಳು ಹೇಳುವುದು ಹಂದಿತ್ವ ಎಂದು ಹೇಳಿದರು.

ಆಶೀರ್ವಚನ ಭಾಷಣ ಮಾಡಿದ ಶ್ರೀ ಸರ್ಪಭೂಷಣ ಮಠದ ಅಧ್ಯಕ್ಷರಾದ ಶ್ರೀ ಶ್ರೀ ಮಲ್ಲಿಕಾರ್ಜುನ ದೇವರು "ಮನಸ್ಸು ಹಂದಿಯಾಗಬಾರದು, ಮನಸ್ಸಿಗೆ ವಿವೇಕವಿದೆ, ಅದರಲ್ಲಿ ಅರಿವು ಮೂಡಿಸಿಕೊಳ್ಳಬೇಕು. ಇದೇ ಇಂದಿನ ವಚನದ ಸಾರಾಂಶ" ಎಂದು ಹೇಳಿದರು.

ನಿ.ಕೆ.ಎ.ಎಸ್. ಅಧಿಕಾರಿ ಶಿವಾನಂದ ಶರ್ಮರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

# ನಮನ

ಬಹುರೂಪಿ  
ಮಣ್ಣಿನ ಮಗ ದೇವರಾಜ ಅರಸರಿಂದ  
ಕರ್ನಾಟಕಕ್ಕೆ  
ಕರ್ನಾಟಕದ ನಾಮಕರಣ  
ಕನ್ನಡಿಗರಿಗೆ ಆಹಾಕಿರಣ  
ಕಲ್ಲಹಳ್ಳಿಯ ಶ್ರಮಜೀವಿ  
ಕಲಾಪ್ರೇಮಿ  
ಕರುಣಾಳು, ಬಡವರ ಬಂಧು  
ಕರ್ನಾಟಕದ ಮಾಜಿ ಮುಖ್ಯಮಂತ್ರಿ  
ದೇವರಾಜ ಅರಸುರವರಿಗೆ  
ಪ್ರೊ.ಜಿ.ಅಬ್ದುಲ್ ಬಷೀರ್‌ರವರ  
ನಮನ ಇಂತಿತ್ತು  
"ಅರಸು ನೀ ನಮ್ಮ ಹರಸು  
ಕರ್ನಾಟಕದ ಸಮಸ್ಯೆಗಳನ್ನು ಬಿಡಿಸು  
ಸಂತ್ರಸ್ತರನು ನೀ ಸಂತೈಸು"  
ಸೇನಾದಿಕಾರಿ ಪದವಿ ಕೈಬಿಟ್ಟ ಅರಸುವಿಗಿತ್ತು  
ಸಾಯದಬದುಕು, ರಾಜಕೀಯದ ನಂಟು,  
ಭೂಸುದಾರಣೆಯ ಪಿತಾಮಹ  
ಅರಸುವಿಗೆ ಇದೋ ನನ್ನ ನಮನ!

- ಟಿ. ನಾರಾಯಣಸ್ವಾಮಿ,  
ಯಶವಂತಪುರ

ಕನ್ನಡಪ್ರಭ, ಗುರುವಾರ, 3 ಸೆಪ್ಟೆಂಬರ್ 2009



## ಸನ್ಮಾನ

ಅರಸು ವಿಚಾರ ವೇದಿಕೆ ಆಶ್ರಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ಜಾಣಗೆರೆ ವೆಂಕಟರಾಯಯ್ಯ ಅವರನ್ನು ಸನ್ಮಾನಿಸಲಾಯಿತು. ರು.ಬಸಪ್ಪ, ಪ್ರಸನ್ನಕುಮಾರ್ ಮತ್ತಿತರರು ಇದ್ದರು.

ಪ್ರಜಾವಾಣಿ
ಸೋಮವಾರ 31ನೇ ಆಗಸ್ಟ್ 2009

## ಸನ್ಮಾನ

ನೃಪತುಂಗ ರಸ್ತೆಯಲ್ಲಿರುವ ಯವನಿಕಾ ಸಭಾಂಗಣದಲ್ಲಿ ಬುಧವಾರ ಯೂತ್ ಹಾಸ್ಟೆಲ್ಸ್ ಅಸೋಸಿಯೇಷನ್ಸ್ ಆಫ್ ಇಂಡಿಯಾ ಸಂಸ್ಥೆಯ ವಜ್ರ ಮಹೋತ್ಸವ ಸಮಾರಂಭದಲ್ಲಿ ಲೋಕಾಯುಕ್ತ ನ್ಯಾಯಮೂರ್ತಿ ಎನ್. ಸಂತೋಷ ಹೆಗ್ಡೆ ಅವರು ಸಂಸ್ಥೆಯ ಸ್ಥಾಪಕ ರಾಷ್ಟ್ರೀಯ ಕಾರ್ಯದರ್ಶಿ ಆರ್.ಜಿ.ಪದಕಿ ಅವರನ್ನು ಸನ್ಮಾನಿಸಿದರು.





ಬೆಂಗಳೂರಿನ ಕನ್ನಡ ಭವನದಲ್ಲಿ ಅರಸು ವಿಚಾರ ವೇದಿಕೆಯು ಶುಕ್ರವಾರ ಹಮ್ಮಿಕೊಂಡಿದ್ದ ದೇವರಾಜ ಅರಸು ಜಯಂತಿ ಸಮಾರಂಭದಲ್ಲಿ ಜಾಣಗೆರೆ ವೆಂಕಟರಾಮಯ್ಯ ಅವರಿಗೆ ಶೇಷಾದ್ರಿಪುರ ಶಿಕ್ಷಣ ದತ್ತಿ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಅವರು ಅರಸು ಪ್ರಶಸ್ತಿ ಪ್ರದಾನ ಮಾಡಿದರು. ಕನ್ನಡ ಸಾಹಿತ್ಯ ಪರಿಷತ್ತಿನ ನಗರ ಜಿಲ್ಲಾ ಅಧ್ಯಕ್ಷ ಸಿ.ಕೆ.ರಾಮೇಗೌಡ, ವೇದಿಕೆ ಸ್ಥಾಪಕ ಅಧ್ಯಕ್ಷ ರು.ಬಸಪ್ಪ, ಸದಸ್ಯರಾದ ಮಧುರಾ ಅಶೋಕ ಕುಮಾರ್, ಉಷಾ ಲಕ್ಷ್ಮಿ ಶ್ರೀನಿವಾಸ್ ಇತರರು ಚಿತ್ರದಲ್ಲಿದ್ದಾರೆ.

# ಅರಸು ಸ್ಮರಣೆ: ಪ್ರಶಸ್ತಿ ಪ್ರದಾನ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಅಸಂಘಟಿತರಾಗಿದ್ದ ಹಿಂದುಳಿದ ಸಮುದಾಯದವರನ್ನು ಒಂದುಗೂಡಿಸುವ ಮೂಲಕ ಡಿ. ದೇವರಾಜ ಅರಸು ಅವರು ಈ ಸಮುದಾಯದವರಿಗೆ ಹೊಸ ಆಯಾಮ ನೀಡಿದರು' ಎಂದು ಶೇಷಾದ್ರಿಪುರ ಶಿಕ್ಷಣ ದತ್ತಿ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಅರಸು ವಿಚಾರ ವೇದಿಕೆಯು ನಗರದ ಕನ್ನಡ ಭವನದಲ್ಲಿ ಶುಕ್ರವಾರ ಹಮ್ಮಿಕೊಂಡಿದ್ದ ದೇವರಾಜ ಅರಸು ಜಯಂತಿ ಮತ್ತು ಅರಸುಶ್ರೀ ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡಿದರು.

'ಒಂದು ಕಾಲದಲ್ಲಿ ರಾಜಕೀಯ ಕ್ಷೇತ್ರ ಮೇಲ್ವರ್ಗದ ಜನರ ಕೈಯಲ್ಲಿತ್ತು. ಆದರೆ ರಾಜಕೀಯ ಶಕ್ತಿಯನ್ನು ವಿಕೇಂದ್ರಿತ ಗೊಳಿಸಿ ಶೋಷಿತ ಹಿಂದುಳಿದ ಸಮುದಾಯದವರಿಗೂ ಅವಕಾಶ ಸಿಗುವಂತೆ ಮಾಡಿದ ಕೀರ್ತಿ ಅರಸು ಅವರಿಗೆ ಸಲ್ಲುತ್ತದೆ' ಎಂದು ಹೇಳಿದರು.

'ಮಲಹೊರುವ ಅನಿಷ್ಟ ಪದ್ಧತಿಯನ್ನು ಸಂಪೂರ್ಣವಾಗಿ ನಿಷೇಧ ಹೇರುವ ಮೂಲಕ ಹಲವು ಕ್ರಾಂತಿಕಾರ ಸುಧಾರಣಾ ಕಾರ್ಯಕ್ರಮಗಳನ್ನು ಅವರು ಜಾರಿಗೆ ತಂದರು. ಆ ಮೂಲಕ ಹಿಂದುಳಿದವರಿಗೆ ಸಾಮಾಜಿಕ, ಆರ್ಥಿಕ ಸ್ಥಾನಮಾನ ನೀಡಲು ಶ್ರಮಿಸಿದರು' ಎಂದರು.

'ಅರಸು ಶ್ರೀ ಪ್ರಶಸ್ತಿ' ಸ್ವೀಕರಿಸಿ ಮಾತನಾಡಿದ ಪತ್ರಕರ್ತ ಜಾಣಗೆರೆ ವೆಂಕಟರಾಮಯ್ಯ, 'ಹಲವರು ಸಂಘಟನೆ ಆರಂಭಿಸುವ ಸಂದರ್ಭದಲ್ಲಿ ತೋರುವ ಉತ್ಸಾಹವನ್ನು ಬಳಿಕ ಮುಂದುವರೆಸುವಲ್ಲಿ ತೋರುವುದಿಲ್ಲ. ಎಲ್ಲರೂ ತಮ್ಮದೂ ಒಂದು ಬಣವಿದೆ ಎಂಬುದನ್ನು ತೋರಲು ಸಂಘ ಕಟ್ಟುತ್ತಾರೆ. ಅಂತಹ ತೋರಿಕೆ ಸಂಘಟನೆಗಳಿಂದ ಯಾವುದೇ ಕೆಲಸ ಆಗುವುದಿಲ್ಲ' ಎಂದು ಹೇಳಿದರು.

ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಸಿ.ಕೆ. ರಾಮೇಗೌಡ ಮಾತನಾಡಿ, 'ಇಂದಿನ ಹಲವು ಕನ್ನಡ ಪರ ಸಂಘಟನೆಯ ನಾಯಕರು ಕೇವಲ ಪ್ರಚಾರಕ್ಕಾಗಿ ಹೇಳಿಕೆ ನೀಡುತ್ತಾರೆ. ಆದರೆ ಕನ್ನಡ ಕಟ್ಟುವ ಕೆಲಸಕ್ಕೆ ಮುಂದಾಗುವುದಿಲ್ಲ. ಇತ್ತೀಚೆಗೆ ಬೆಂಗಳೂರಿನಲ್ಲಿ ತಮಿಳು ಕವಿ ತಿರುವಳ್ಳುವರ್ ಪ್ರತಿಮೆ ಅನಾವರಣಕ್ಕೆ ಅಡ್ಡಿಪಡಿಸಿ ಬಂದ್‌ಗೆ ಕರೆ ನೀಡಿದವು. ಆದರೆ ಅದಕ್ಕೆ ಜನ ಬೆಂಬಲ ಸಿಗಲಿಲ್ಲ. ಇದರಿಂದ ಈ ಸಂಘಟನೆಗಳಿಗೆ ಕನ್ನಡಿಗರ ಬೆಂಬಲವಿಲ್ಲ ಎಂಬುದು ಸಾಬೀತಾಗುತ್ತದೆ' ಎಂದು ಹೇಳಿದರು.

ಪ್ರಬಂಧ ಸ್ಪರ್ಧೆ ವಿಜೇತರಿಗೆ ಬಹುಮಾನ: ಇದೇ ಸಂದರ್ಭದಲ್ಲಿ ಅರಸು ವಿಷಯ ಕುರಿತು ನಡೆಸಿದ ಪ್ರಬಂಧ ಸ್ಪರ್ಧೆಯಲ್ಲಿ ವಿಜೇತರಾದ ಕಾಲೇಜು ವಿದ್ಯಾರ್ಥಿಗಳಿಗೆ ಬಹುಮಾನ ನೀಡಿ ಸನ್ಮಾನಿಸಲಾಯಿತು.

ಸಂಘಟನೆ ಸ್ಥಾಪಕ ಅಧ್ಯಕ್ಷ ರು. ಬಸಪ್ಪ, ಸಂಘಟನೆ ಅಧ್ಯಕ್ಷೆ ನಳಿನಿ ಮಹದೇವಸ್ವಾಮಿ, ಸಾಹಿತಿ ಮಧುಬಿಲ್ಲಿನ ಕೋಟೆ ಮತ್ತಿತರರು ಪಾಲ್ಗೊಂಡಿದ್ದರು.




ಯೂತ್ ಹಾಸ್ಟೆಲ್ಸ್ ಅಸೋಸಿಯೇಷನ್ ಆಫ್ ಇಂಡಿಯಾದ ವಜ್ರ ಮಹೋತ್ಸವ ಸಮಾರಂಭವನ್ನು ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ ಹೆಗ್ಡೆ ಉದ್ಘಾಟಿಸಿದರು. ಸಂಸ್ಥೆಯ ಸ್ಥಾಪಕ ರಾಷ್ಟ್ರೀಯ ಕಾರ್ಯದರ್ಶಿ ಆರ್.ಜಿ.ಪದಕಿ, ಬೆಂಗಳೂರು ಘಟಕದ ಅಧ್ಯಕ್ಷ ಡಾ.ವೋಡೇ ಪಿ.ಕೃಷ್ಣ, ರಾಜ್ಯ ಘಟಕದ ಮಾಜಿ ಅಧ್ಯಕ್ಷ ಟಿ.ಎಸ್.ವೆಂಕಟನಂಜಪ್ಪ, ರಾಜ್ಯ ಘಟಕದ ಮಾಜಿ ಕಾರ್ಯದರ್ಶಿ ಸಿ.ಎನ್.ಎನ್.ರಾಜು ಹಾಗೂ ಇತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಶುಕ್ರವಾರ 28 ಆಗಸ್ಟ್ 2009



ನಗರದ ಯವನಿಕಾ ಸಭಾಂಗಣದಲ್ಲಿ ಇತ್ತೀಚೆಗೆ ನಡೆದ ಯೂತ್ ಹಾಸ್ಟೆಲ್ ಅಸೋಸಿಯೇಷನ್ ಆಫ್ ಇಂಡಿಯಾದ ವಜ್ರ ಮಹೋತ್ಸವ ಸಮಾರಂಭದಲ್ಲಿ ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ್ ಹೆಗ್ಡೆ ಸಂಸ್ಥೆಯ ರಾಷ್ಟ್ರೀಯ ಕಾರ್ಯದರ್ಶಿ ಆರ್.ಜೆ. ಪದಕಿ ಅವರನ್ನು ಸನ್ಮಾನಿಸಿದರು. ನಗರ ಘಟಕ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ರಾಜ್ಯ ಘಟಕ ಮಾಜಿ ಅಧ್ಯಕ್ಷ ಟಿ.ಎಸ್. ವೆಂಕಟನಂಜಪ್ಪ, ಮಾಜಿ ಕಾರ್ಯದರ್ಶಿ ಸಿ.ಎನ್.ಆರ್. ರಾಜು ಚಿತ್ರದಲ್ಲಿದ್ದಾರೆ.

ಕನ್ನಡಪ್ರಭ, ಶುಕ್ರವಾರ, 28 ಆಗಸ್ಟ್ 2009



## ವಜ್ರ ಮಹೋತ್ಸವ

ಯೂತ್ ಹಾಸ್ಟೆಲ್ ಅಸೋಸಿಯೇಶನ್ ಆಫ್ ಇಂಡಿಯಾದ ವಜ್ರ ಮಹೋತ್ಸವ ಸಮಾರಂಭದಲ್ಲಿ ಲೋಕಾಯುಕ್ತ ನ್ಯಾ।ಎನ್.ಸಂತೋಷ್ ಹೆಗ್ಡೆ, ಆರ್.ಜಿ.ಪದಕಿ, ಡಾ।ವೂಡೇ ಪಿ.ಕೃಷ್ಣ, ಟಿ.ಎಸ್.ವೆಂಕಟನಂಜಪ್ಪ ಮತ್ತಿತರರು.

ಈ ಸಂಜೆ
ಶುಕ್ರವಾರ, 28 ಆಗಸ್ಟ್, 2009

## ಸನ್ಮಾನ...



ಅರಸು ವಿಚಾರ ವೇದಿಕೆ ಹಮ್ಮಿಕೊಂಡಿದ್ದ ಜಾಗೃತಿ ಕಾರ್ಯಕ್ರಮದಲ್ಲಿ ಜಯಕರ್ನಾಟಕ ರಾಜ್ಯಾಧ್ಯಕ್ಷ ಜಾಣಗೆರೆ ವೆಂಕಟರಾಮಯ್ಯ ಅವರಿಗೆ ಅರಸು ಶ್ರೀ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಮಾಜಿ ಸಚಿವ ಬಾಲಚಂದ್ರಜಾರಕಿಹೊಳಿ, ಡಾ. ವೂಡೆ ಪಿ.ಕೃಷ್ಣ, ಪ್ರೊ. ಪಿ.ಸದಾಶಿವ ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ । ಬೆಂಗಳೂರು । 27-8-2009



ನ್ಯಾಯಮೂರ್ತಿ ಲೋಕಾಯುಕ್ತ ಸಂತೋಷ ಹೆಗ್ಡೆ ಅವರು ಬುಧವಾರ ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಯೂಥ್ ಹಾಸ್ಟೇಲ್ ಅಸೋಸಿಯೇಷನ್ ಆಫ್ ಇಂಡಿಯಾ ಸಂಸ್ಥೆಯ ವಜ್ರ ಮಹೋತ್ಸವವನ್ನು ಉದ್ಘಾಟಿಸಿದ ಸಂದರ್ಭದಲ್ಲಿ ವಕೀಲ ವೆಂಕಟ ನಂಜಪ್ಪ, ಸಂಸ್ಥೆಯ ಸಂಸ್ಥಾಪಕ ಆರ್.ಜಿ. ಪದಕಿ, ಸಂಸ್ಥೆಯ ಅಧ್ಯಕ್ಷ ಡಬ್ಲ್ಯೂ. ಪಿ. ಕೃಷ್ಣ ಮುಂತಾದವರು ಉಪಸ್ಥಿತರಿದ್ದರು.

# ಇಂದಿನ ಕಾರ್ಯಕ್ರಮ

## ಬುಧವಾರ 26-08-2009

ಮಧ್ಯಾಹ್ನ

**ಪ್ರಜಾವಾಣಿ**

ಬುಧವಾರ 26ನೇ ಆಗಸ್ಟ್ 2009

**ಯೂತ್ ಹಾಸ್ಟೆಲ್ಸ್ ಅಸೋಸಿಯೇಶನ್ (ವೈಎಚ್ಎ) ಆಫ್ ಇಂಡಿಯಾ:** ಯವನಿಕಾ, ನೃಪತುಂಗ ರಸ್ತೆ. ವೈಎಚ್ಎ ರಜತ ಮಹೋತ್ಸವ ಸಮಾರಂಭ. ಉದ್ಘಾಟನೆ- ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ ಹೆಗ್ಡೆ. ಅತಿಥಿ- ವೈಎಚ್ಎ ರಾಷ್ಟ್ರೀಯ ಕಾರ್ಯದರ್ಶಿ ಆರ್.ಜಿ. ಪದಕಿ. ಅಧ್ಯಕ್ಷತೆ- ವೈಎಚ್ಎ ಬೆಂಗಳೂರು ದಕ್ಷಿಣ ಘಟಕದ ಅಧ್ಯಕ್ಷ ಡಬ್ಲ್ಯು.ಪಿ. ಕೃಷ್ಣ. ಸಂಜೆ 6.30.

**ಸಂಯುಕ್ತ ಕರ್ನಾಟಕ**

**26-8-2009**

6-30 ನೃಪತುಂಗಾ ರಸ್ತೆ, ರಾಜ್ಯ ಯುವ ಕೇಂದ್ರ, ಯವನಿಕಾ. ಯೂತ್ ಹಾಸ್ಟೆಲ್ ಅಸೋಸಿಯೇಷನ್ ಆಫ್ ಇಂಡಿಯಾದ ಸುವರ್ಣ ಮಹೋತ್ಸವ. ಉಪಸ್ಥಿತಿ: ನ್ಯಾಯಮೂರ್ತಿ ಸಂತೋಷ್ ಹೆಗಡೆ, ಆರ್. ಜಿ. ಪದಕಿ, ಅಧ್ಯಕ್ಷತೆ: ವೂಡೆ ಪಿ. ಕೃಷ್ಣ.

**ಕನ್ನಡಪ್ರಭ, ಬುಧವಾರ, 26 ಆಗಸ್ಟ್ 2009**

■ ಯೂತ್ ಹಾಸ್ಟೆಲ್ ಅಸೋಸಿಯೇಶನ್: ವಜ್ರಮಹೋತ್ಸವ, ಅತಿಥಿ- ನ್ಯಾ|ಸಂತೋಷ್ ಹೆಗ್ಡೆ, ಆರ್.ಜಿ.ಪದ್ಕಿ, ಯವನಿಕಾ, ನೃಪತುಂಗ ರಸ್ತೆ, ಸಂಜೆ 6.30.

**DECCAN HERALD**

Wednesday, August 26, 2009

**Youth Hostels Association of India:** Centenary of youth Hostelling International and Diamond Jubilee of Hostels. Justice Santosh Hegde of Lokayukta participate. Yavanika, Nrupathunga Road, 6.30 pm.

ಪ್ರಜಾವಾಣಿ

ಭಾನುವಾರ
23ನೇ ಆಗಸ್ಟ್ 2009




ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಇತ್ತೀಚೆಗೆ ಪಿ.ಎಚ್‌ಡಿ ಪುರಸ್ಕೃತರಾದ ಸಂಸ್ಥೆಯ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಅವರನ್ನು ಸನ್ಮಾನಿಸಲಾಯಿತು. ಚಿತ್ರದಲ್ಲಿ ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ, ಪ್ರೊ.ಬೈರೇಗೌಡ, ಉಪನ್ಯಾಸಕರಾದ ಪ್ರತಾಪ್ ಲಿಂಗಯ್ಯ, ಎನ್.ಸತೀಶ್ ಹಾಗೂ ರೇಖಾ ಕೌಶಿಕ್ ಇದ್ದಾರೆ.

# ಅಧ್ಯಾಪಕರು ಅಧ್ಯಯನಶೀಲರಾಗಲು ಕರೆ

ಬೆಂಗಳೂರು: 'ಶಿಕ್ಷಣ ಸಂಸ್ಥೆಗಳಿಗೆ ಅಧ್ಯಾಪಕರೇ ಆಧಾರಸ್ತಂಭ. ಹೀಗಾಗಿ ಅಧ್ಯಾಪಕರು ಹೆಚ್ಚು ಅಧ್ಯಯನಶೀಲರಾಗಿ ತಮ್ಮ ಅಧ್ಯಾಪನದ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳಬೇಕು' ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಅವರು ಡಾಕ್ಟರೇಟ್ ಪದವಿ ಗಳಿಸಿದ್ದಕ್ಕಾಗಿ ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಸನ್ಮಾನ ಸ್ವೀಕರಿಸಿ ಮಾತನಾಡಿದರು.

'ಶಿಕ್ಷಣ ಸಂಸ್ಥೆಗಳೂ ಸಹ ಶಿಕ್ಷಕರ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಬೇಕು' ಎಂದು ಸೂಚಿಸಿದರು.

ಪ್ರಾಸ್ತಾವಿಕ ಭಾಷಣ ಮಾಡಿದ ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ, ಅನೇಕ ವೇಳೆ ಶಿಕ್ಷಣ ಸಂಸ್ಥೆಗಳನ್ನು ನಡೆಸುವವರು ಶಿಕ್ಷಕರಿಗೆ ಪ್ರೋತ್ಸಾಹ ನೀಡುತ್ತಾರೆ. ಬಹುಮುಖ ಪ್ರತಿಭೆಯ ಕೃಷ್ಣ ಅವರು ಬಿಡುವಿಲ್ಲದ ಕೆಲಸಗಳ ನಡುವೆಯೂ ಅಧ್ಯಯನ ನಡೆಸಿ, ಎಲ್ಲ ಸಂಸ್ಥೆಗಳಿಗೂ ಮೇಲ್ಪಂಕ್ತಿ ಹಾಕಿದ್ದಾರೆ. ಶೈಕ್ಷಣಿಕ ಸಂಸ್ಥೆಗಳಿಗೆ ಇಂಥ ಅಧ್ಯಯನಶೀಲರ ಅಗತ್ಯವಿದೆ ಎಂದರು.

ಪಿಹೆಚ್.ಡಿ ಅಧ್ಯಯನಗಳು ಕೇವಲ ಪ್ರಬಂಧಗಳ ರೂಪದಲ್ಲಿ ಉಳಿದು ಬಿಡಬಾರದು ಎಂದರು.

ಪ್ರಜಾವಾಣಿ ಮಂಗಳವಾರ 18ನೇ ಆಗಸ್ಟ್ 2009

# 'ಭಯೋತ್ಪಾದನೆ ಎದುರಿಸುವ ಗುಣ ವಿದ್ಯಾರ್ಥಿಗಳಲ್ಲಿ ಬೆಳೆಯಲಿ'

ಬೆಂಗಳೂರು: ಅಭಿವೃದ್ಧಿಯಲ್ಲಿ ಉನ್ನತ ಸ್ಥಾನ ಗಳಿಸುತ್ತಿರುವ ಭಾರತದಲ್ಲಿ ಹುಟ್ಟಿಕೊಂಡಿರುವ ಭಯೋತ್ಪಾದನೆ ಮತ್ತು ಅಶಿಸ್ತಿನ ವಾತಾವರಣವನ್ನು ಎದುರಿಸುವ ಶಕ್ತಿ ವಿದ್ಯಾರ್ಥಿಗಳಲ್ಲಿ ಬರಬೇಕು ಎಂದು ಭಾರತ ಸೇವಾ ದಳದ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಅವರು ಹೇಳಿದರು.

ನಗರದ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನಲ್ಲಿ 63ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಿ ಮಾತನಾಡಿದ ಅವರು 'ಪ್ರಕೃತಿ ಎಲ್ಲರಿಗೂ ಸಮಾನವಾಗಿ ಗಾಳಿ, ನೀರು ನೀಡುತ್ತಿದೆ ಆದರೆ ಭಾಷೆ, ಜಾತಿ, ಧರ್ಮದ ಹೆಸರಿನಲ್ಲಿ ನಾವು ಜಗಳವಾಡುತ್ತಿದ್ದೇವೆ ಎಂದು ವಿಷಾದ ವ್ಯಕ್ತಪಡಿಸಿ, ಯುವಕರಲ್ಲಿ ಆತ್ಮಶಕ್ತಿಯ ಕೊರತೆ ಇದೆ. ಅವರಲ್ಲಿ ಏಕತೆ, ಸಾರ್ವಭೌಮತೆ ಮೂಡಿಸುವಲ್ಲಿ ಉಪನ್ಯಾಸಕರ ಪಾತ್ರ ಬಹಳ ಪ್ರಮುಖವಾದುದು' ಎಂದರು.

ಸಂಸ್ಥೆಯ ಅಧ್ಯಕ್ಷರಾದ ಎನ್.ಆರ್.ಪಂಡಿತಾರಾಧ್ಯ ಮಾತನಾಡಿ, 'ಪ್ರತಿಯೊಬ್ಬ ಭಾರತೀಯನು ಸೇವಾ ಮನೋಭಾವ, ಏಕತೆ, ಶಿಸ್ತು, ಆತ್ಮ ವಿಶ್ವಾಸ ಗುಣಗಳು ಮೈಗೂಡಿಸಿಕೊಳ್ಳಬೇಕು' ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಸ್ವಾಗತಿಸಿದರು. ಕಾರ್ಯಕ್ರಮವನ್ನು ಉಪನ್ಯಾಸಕ ಎಂ. ಪ್ರಕಾಶ್ ನಿರೂಪಿಸಿದರು. ಪ್ರಾಂಶುಪಾಲರಾದ ಪ್ರೊ.ಗಾಂಧಿ ಡಿ. ಪ್ರಭು ವಂದಿಸಿದರು.

ಸಂಯುಕ್ತ ಕರ್ನಾಟಕ **18-8-2009**



ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಆರಂಭಿಸಿದ ನೂತನ ಚಿಕಿತ್ಸಾಲಯವನ್ನು ಭಾರತ ಸೇವಾದಲದ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಪ್ರೊ.ಡೇ ಪಿ. ಕೃಷ್ಣ, ಜಂಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಡಾ. ಶುಭ ಉಪಸ್ಥಿತರಿದ್ದರು.

ಕನ್ನಡಪ್ರಭ, ಸೋಮವಾರ, 17 ಆಗಸ್ಟ್ 2009



## ಚಿಕಿತ್ಸಾಲಯ

ಸ್ವಾತಂತ್ರ್ಯೋತ್ಸವ ದಿನದಂದು ಶೇಷಾದ್ರಿಪುರ ಕಾಲೇಜಿನಲ್ಲಿ ಚಿಕಿತ್ಸಾಲಯವನ್ನು ಭಾರತ ಸೇವಾದಲದ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಉದ್ಘಾಟಿಸಿದರು. ಎನ್.ಆರ್. ಪಂಡಿತಾರಾಧ್ಯ, ಡಾ|ವೂಡೇ ಪಿ.ಕೃಷ್ಣ, ಎ.ಆರ್. ಶ್ರೀನಿವಾಸಯ್ಯ, ಡಾ|ನರಹಳ್ಳಿ ಬಾಲಸುಬ್ರಹ್ಮಣ್ಯ, ಡಾ|ಶುಭ ಇದ್ದರು.

ಉದಯವಾಣಿ

2 ನಮ್ಮ ಬೆಂಗಳೂರು

ಆಗಸ್ಟ್ 18, 2009

# ಕ್ಯಾಂಪಸ್ ಕ್ಲಿನಿಕ್ ಉದ್ಘಾಟನೆ



ಶೇಷಾದ್ರಿಪುರಂ ಕಾಲೇಜಿನ ನೂತನ ಚಿಕಿತ್ಸಾಲಯವನ್ನು ಭಾರತ ಸೇವಾದಳ ಪ್ರದಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಉದ್ಘಾಟಿಸಿದರು. ಶೇಷಾದ್ರಿ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಎ.ಆರ್. ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಡಾ. ಶುಭಾ ಉಪಸ್ಥಿತರಿದ್ದರು.

168

ಸಂಜೆವಾಣಿ

ಸೋಮವಾರ 17 ಆಗಸ್ಟ್ 2009



ನಗರದ ಶೇಷಾದ್ರಿಪುರಂ ಕಾಲೇಜಿನ ನೂತನ ಚಿಕಿತ್ಸಾಲಯವನ್ನು ಭಾರತ ಸೇವಾದಳ ಪ್ರಧಾನ ಕಾರ್ಯದರ್ಶಿ ಯು.ಆರ್.ಸಭಾಪತಿ ಉದ್ಘಾಟಿಸಿದರು.

ಸಂಯುಕ್ತ ಕರ್ನಾಟಕ । ಬೆಂಗಳೂರು । 13-8-2009



ಜಿನಿವಾ ಒಪ್ಪಂದ ದಿನಾಚರಣೆ ಅಂಗವಾಗಿ ಬೆಂಗಳೂರಿನಲ್ಲಿ ಬುಧವಾರ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ರಾಜ್ಯಪಾಲ ಎಚ್.ಆರ್.ಭಾರದ್ವಾಜ್ ತುರ್ತು ಸೇವೆಗಳ ಅಮೆಚೂರು ರೇಡಿಯೋ ಸ್ಟೇಷನ್ ಮತ್ತು ಸಂಸ್ಥೆಯ ಸಂಸ್ಥಾಪಕ 'ಹೆನ್ರಿ ಡ್ಯೂನಾಂಟ್' ಸಭಾಂಗಣ ಹಾಗೂ ಸಂಸ್ಥೆಯ 'ಹ್ಯಾಮ್' ವ್ಯವಸ್ಥೆಯನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಂಸ್ಥೆಯ ಉಪಸಭಾಧ್ಯಕ್ಷ ವೂಡೆ ಪಿ. ಕೃಷ್ಣ, ರಾಜು ಚಂದ್ರಶೇಖರ್, ಮೀರಾ ಶಿವಲಿಂಗಯ್ಯ ಉಪಸ್ಥಿತರಿದ್ದರು.



ಶೇಷಾದ್ರಿಪುರಂ ಕಾಲೇಜಿನ ನೂತನ ಚಿಕಿತ್ಸಾಲಯವನ್ನು ಭಾರತ ಸೇವಾದಲ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಉದ್ಘಾಟಿಸಿದರು. ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್. ಆರ್.ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಜಂಟಿ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ.ಸರಹಳ್ಳಿ ಬಾಲಸುಬ್ರಹ್ಮಣ್ಯ, ಡಾ.ಶುಭ ಹಾಗೂ ಇತರರು ಉಪಸ್ಥಿತರಿದ್ದರು.

ಸಂಜೆವಾಣಿ
ಬುಧವಾರ 12 ಆಗಸ್ಟ್ 2009

# ಕ್ಷಯ ನಿರ್ಮೂಲನೆ: ರೆಡ್‌ಕ್ರಾಸ್‌ಗೆ ಕರೆ

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಆ. ೧೨- ಬಡಜನರ ಸೇವೆಗೆ ತನ್ನನ್ನು ತಾನು ತೊಡಗಿಸಿಕೊಳ್ಳುವಂತೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ ರಾಜ್ಯಪಾಲ ಹೆಚ್.ಆರ್. ಭಾರದ್ವಾಜ್ ಇಂದಿಲ್ಲಿ ಕರೆ ನೀಡಿದರು.

ರೆಡ್‌ಕ್ರಾಸ್ ಸಂಸ್ಥೆ ರಕ್ತನಿಧಿಗೆ ಆದ್ಯತೆ ನೀಡದೆ, ಕ್ಷಯರೋಗದಂತಹ ರೋಗಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸುವ ಕೆಲಸ ಮಾಡಬೇಕಾಗಿದೆ. ಆ ಮೂಲಕ ರೋಗ ತಡಗಟ್ಟಲು ಮುಂದಾಗುವಂತೆ ಸಲಹೆ ಮಾಡಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆ ವತಿಯಿಂದ ನಗರದಲ್ಲಿಂದು ಹಮ್ಮಿಕೊಂಡಿದ್ದ 60ನೇ ಜಿನೆವಾ ಒಪ್ಪಂದ ದಿನಾಚರಣೆ ಉದ್ಘಾಟಿಸಿ, ಬಳಿಕ ಹೆನ್ರಿ ಡುನಾಂಟ್ ಸಭಾಂಗಣ ಮತ್ತು ರೆಡ್‌ಕ್ರಾಸ್ ಅಮೆಚೂರ್ ರೇಡಿಯೋ ಸ್ಟೇಷನ್ ಉದ್ಘಾಟಿಸಿ ಅವರು ಮಾತನಾಡಿದರು.

ಪ್ರಾಕೃತಿಕ ವಿಪತ್ತು, ಅಪಘಾತ, ಮಾನವ ನಿರ್ಮಿತ ಆಪತ್ತುಗಳಿಂದ ಸಮಸ್ಯೆಗೆ ಸಿಲುಕಿದವರಿಗೆ ಸೇವೆ ನೀಡುವ ರೆಡ್‌ಕ್ರಾಸ್ ಸಂಸ್ಥೆ ಅಂಟುರೋಗವಾದ ಕ್ಷಯರೋಗದ ನಿರ್ಮೂಲನೆಗೆ ತನ್ನನ್ನು ತಾನು ತೊಡಗಿಸಿಕೊಳ್ಳಬೇಕು ಎಂದರು.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆ ನಗರದಲ್ಲಿಂದು ಹಮ್ಮಿಕೊಂಡಿದ್ದ 60ನೇ ಜಿನೇವಾ ಒಪ್ಪಂದದ ದಿನಾಚರಣೆ ಹಾಗೂ ರೆಡ್‌ಕ್ರಾಸ್ ಅಮೆಚೂರು ರೇಡಿಯೋ ಸ್ಟೇಷನ್ ಉದ್ಘಾಟಿಸಿ ಮಾತನಾಡುತ್ತಿರುವುದು. ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೆ ಪಿ ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪದಾಧಿಕಾರಿಗಳಾದ ಡಾ. ಜಿ ಎನ್ ನಾರಾಯಣ, ಮೀರಾ ಶಿವಲಿಂಗಯ್ಯ ಇದ್ದಾರೆ.

ಪ್ರಾಕೃತಿಕ ವಿಪತ್ತುಗಳು ರಾಜ್ಯದಲ್ಲಿ ಸಂಭವಿಸದೆ ಇರುವ ಹಿನ್ನೆಲೆಯಲ್ಲಿ ಬಡಜನರ ಆರೋಗ್ಯ ಕಾಪಾಡಲು ಮುಂದಾಗಬೇಕು. ಆ ಮೂಲಕ ಮತ್ತಷ್ಟು ಸೇವೆ ನೀಡುವಂತೆ ತಿಳಿಸಿದರು.

ಗ್ರಾಮಾಂತರ ಪ್ರದೇಶಗಳಲ್ಲೂ ಸಮಸ್ಯೆಗಳನ್ನು ಗುರ್ತಿಸಿ ಸಂಸ್ಥೆಯ ಮೂಲಕ ಅದನ್ನು ನಿವಾರಣೆ ಮಾಡಲು ಪ್ರಯತ್ನಿಸಿ ಎಂದು ರೆಡ್‌ಕ್ರಾಸ್ ಸಂಸ್ಥೆಯ ಅಧ್ಯಕ್ಷರಾಗಿರುವ ರಾಜ್ಯಪಾಲ ಹೆಚ್.ಆರ್. ಭಾರದ್ವಾಜ್ ಹೇಳಿದರು.

ಸಂಸ್ಥೆ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಮಾತನಾಡಿ, ವಿಶ್ವಕ್ಕೆ ಭ್ರಾತೃತ್ವ ಸಾರಿದವರು ಹೆನ್ರಿ ಡುನಾಂಟ್ ಅವರು ಸಾಮಾಜಿಕ ನ್ಯಾಯವಾದಿಯಾಗಿದ್ದರು ಎಂದು ಅವರು ಹೇಳಿದರು. ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಮೀರಾ ಶಿವಲಿಂಗಯ್ಯ ಡಾ. ಎನ್.ಜಿ. ನಾರಾಯಣ ಮತ್ತಿತರರು ಉಪಸ್ಥಿತರಿದ್ದರು.

## ಶ್ರೀರಾಮುಲು ಗೈರು

ಸರ್ಕಾರದ ಸಭೆ ಸಮಾರಂಭಗಳಿಗೆ ಗೈರು ಹಾಜರಾಗುವ ಚಾಳಿಯನ್ನು ಮುಂದುವರೆಸಿರುವ ಆರೋಗ್ಯ ಸಚಿವ ಶ್ರೀರಾಮುಲು ರಾಜ್ಯಪಾಲರು ಭಾಗವಹಿಸಿದ್ದ ರೆಡ್‌ಕ್ರಾಸ ಸಂಸ್ಥೆಯ ಕಾರ್ಯಕ್ರಮಕ್ಕೂ ಗೈರು ಹಾಜರಾಗಿದ್ದರು.

ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಸಭಾಧ್ಯಕ್ಷರು ಆಗಿರುವ ಸಚಿವ ಶ್ರೀರಾಮುಲು ಗೈರು ಹಾಜರಿ ಎದ್ದು ಕಾಣುತ್ತಿತ್ತು.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರೆಡ್‌ಕ್ರಾಸ್ ಭವನದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಜಿನೆವಾ ಒಪ್ಪಂದ ದಿನಾಚರಣೆ ಅಂಗವಾಗಿ ತುರ್ತು ಸೇವೆಗಳ ಅಮೆಚೂರ್ ರೇಡಿಯೋ ಸ್ಟೇಷನ್ ಹಾಗೂ ಸಂಸ್ಥಾಪಕ ಹೆನ್ರಿ ಟ್ಯುನಾಂಟ್ ಸಭಾಂಗಣವನ್ನು ರಾಜ್ಯಪಾಲ ಎಚ್.ಆರ್.ಭಾರದ್ವಾಜ್ ಉದ್ಘಾಟಿಸಿದರು. ರೆಡ್‌ಕ್ರಾಸ್‌ನ ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಮೀರಾ ಶಿವಲಿಂಗಯ್ಯ ಮತ್ತಿತರರು ಉಪಸ್ಥಿತರಿದ್ದರು.

# ಬಡವರ ಏಳ್ಗೆಗೆ ಕಾರ್ಯಕ್ರಮ ರೂಪಿಸಿ: ಭಾರದ್ವಾಜ್

ಬೆಂಗಳೂರು, ಆ.12-ರೆಡ್‌ಕ್ರಾಸ್ ಸಂಸ್ಥೆ ಕೇವಲ ರಕ್ತ ನಿಧಿಯಷ್ಟೇ ಅಲ್ಲದೆ ಬಡವರಿಗಾಗಿ ವಿವಿಧ ಸೇವಾಯೋಜನೆಗಳನ್ನು ಕೈಗೊಳ್ಳಬೇಕೆಂದು ಸಂಸ್ಥೆ ಅಧ್ಯಕ್ಷರೂ ಆಗಿರುವ ರಾಜ್ಯಪಾಲ ಎಚ್.ಆರ್. ಭಾರದ್ವಾಜ್ ಇಂದು ಸಲಹೆ ಮಾಡಿದ್ದಾರೆ.

ಜಿನೆವಾ ಒಪ್ಪಂದ ದಿನಾಚರಣೆ ಅಂಗವಾಗಿ ತುರ್ತು ಸೇವೆಗಳ ಅಮೆಚೂರ್ ರೇಡಿಯೋ ಸ್ಟೇಷನ್ ಹಾಗೂ ಸಂಸ್ಥಾಪಕ ಹೆನ್ರಿ ಟ್ಯುನಾಂಟ್ ಸಭಾಂಗಣ ಉದ್ಘಾಟಿಸಿ ಅವರು ಮಾತನಾಡಿದರು.

ರೆಡ್‌ಕ್ರಾಸ್ ಸಂಸ್ಥೆ ಎಂದಿಗೂ ವಿಪತ್ತುಗಳ ನಿರ್ವಹಣೆಯಲ್ಲಿ ತೊಡಗಿಸಿಕೊಂಡಿದೆ. ಅದೃಷ್ಟವಶಾತ್ ಕರ್ನಾಟಕ ಅತ್ಯಂತ ಸುರಕ್ಷಿತ ಹಾಗೂ ಸುಸಂಸ್ಕೃತ ರಾಜ್ಯವಾಗಿರುವುದರಿಂದ ವಿಪತ್ತುಗಳ ಬಗ್ಗೆ ತಲೆಕೆಡಿಸಿಕೊಳ್ಳುವ ಹಾಗಿಲ್ಲ. ಅದಕ್ಕಾಗಿ ಕರ್ನಾಟಕ ರೆಡ್‌ಕ್ರಾಸ್ ಸಂಸ್ಥೆ ಬಡವರಿಗೆ ಅತ್ಯಗತ್ಯವಿರುವ ಸೇವೆಗಳಿಗೆ ಹೆಚ್ಚಿನ ಆಸಕ್ತಿ ತೋರಬೇಕು ಎಂದು ಸಲಹೆ ಮಾಡಿದರು.

ರೆಡ್‌ಕ್ರಾಸ್ ಸಂಸ್ಥೆಯ ಮಾನವೀಯ ಸೇವೆಗಳನ್ನು ಕೊಂಡಾಡಿದ ಅವರು, ರೆಡ್‌ಕ್ರಾಸ್ ಹ್ಯಾಮ್ ರೇಡಿಯೋ ಸೌಲಭ್ಯ ಆರಂಭಿಸಿರುವುದು ಒಂದು ಪ್ರಮುಖ ಮೈಲಿಗಲ್ಲು.

ಇಂಥ ಮಾನವೀಯ ಚಟುವಟಿಕೆಗಳಿಗೆ ಜನಸಾಮಾನ್ಯರು ಕಾರ್ಪೊರೇಟ್ ಸಂಸ್ಥೆ, ದಾನಿಗಳು ರೆಡ್‌ಕ್ರಾಸ್ ಜತೆ ಕೈ ಜೋಡಿಸಬೇಕೆಂದರು.

ಸಂಸ್ಥೆಯ ಉಪಸಭಾಧ್ಯಕ್ಷ ವೂಡೇ ಪಿ. ಕೃಷ್ಣ, ಸರ್ ಹೆನ್ರಿ ಟ್ಯಾನಾಂಟ್ ಕುರಿತು ಹೆಮ್ಮೆಯ ಮಾತುಗಳನ್ನಾಡಿದರು.

ಟ್ಯುನಾಂಟ್ ಅವರ ಸೇವೆಯ ಅಲ್ಪ ಭಾಗವನ್ನಾದರೂ ಯುವ ಪೀಳಿಗೆ ಅನುಸರಿಸಬೇಕೆಂದು ಕರೆ ನೀಡಿದರು.

ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್. ಜಿ. ನಾರಾಯಣ ಹಾಗೂ ಮೀರಾ ಶಿವಲಿಂಗಯ್ಯ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ | 3
ಬೆಂಗಳೂರು | 09-08-2009

# ಸ್ವದೇಶಿ ಶತ್ರುಗಳಿದ್ದಾರೆ, ಎಚ್ಚರಿಕೆ



ಕರ್ನಾಟಕ ಸರ್ವೋದಯ ಮಂಡಲ ಅಡ್‌ಹಾಕ್ ಸಮಿತಿ ಶನಿವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಗಾಂಧಿಭವನದಲ್ಲಿನ ರೇಷ್ಮೆ ಖಾದಿ ವಿಭಾಗವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹೊ. ಶ್ರೀನವಾಸಯ್ಯ, ಪಾಟೀಲ ಪುಟ್ಟಪ್ಪ, ಎಚ್.ಎಸ್. ದೊರೆಸ್ವಾಮಿ ಮತ್ತಿತರರು ಹಾಜರಿದ್ದರು.

ಬೆಂಗಳೂರು, ಆ. 8: ದೇಶದಲ್ಲಿಯೇ ಇದ್ದು ದೇಶದ ಆಂತರಿಕ ಶಾಂತಿಯನ್ನು ಕದಡುತ್ತಿರುವ ಶಕ್ತಿಗಳು ರಾಷ್ಟ್ರದ ಅತೀ ದೊಡ್ಡ ಶತ್ರುಗಳೇ ಹೊರತು ವಿದೇಶದಿಂದ ಬರುವ ಭಯೋತ್ಪಾದಕರಲ್ಲ ಎಂದು ರಾಜ್ಯಪಾಲರಾದ ಹಂಸರಾಜ್ ಭಾರದ್ವಾಜ್ ಹೇಳಿದ್ದಾರೆ.

ಕರ್ನಾಟಕ ರಾಜ್ಯವು ಪವಿತ್ರ ನೆಲೆಯಾಗಿದ್ದು, ಗಾಂಧೀಜಿಯವರಿಗೆ ಮಾದರಿಯಾಗಿ, ದಕ್ಷಿಣ, ಉತ್ತರ ಭಾರತವನ್ನು ಒಂದುಗೂಡಿಸಿರುವ ಆದಿ ಶಂಕರರು ಹುಟ್ಟಿದ ನಾಡಿದು. ಇಂತಹ ಶಾಂತಿಪ್ರಿಯವಾದ ರಾಜ್ಯದಲ್ಲಿ ಕೋಮು ಸಂಘರ್ಷ, ಜಾತಿ ಸಂಘರ್ಷದಿಂದಾಗಿ ನಡೆಯುತ್ತಿರುವ ಘಟನೆಗಳು ನನಗೆ ಘಾಸಿ ತರುವಂತಹದಾಗಿದೆ ಎಂದು ವಿಷಾದ ವ್ಯಕ್ತಪಡಿಸಿದ್ದಾರೆ.

ಶನಿವಾರ ನಗರದ ಕರ್ನಾಟಕ ಸರ್ವೋದಯ ಮಂಡಲ ಅಡ್ಹಾಕ್ ಕಮಿಟಿಯು ಆಯೋಜಿಸಿದ ಗಾಂಧಿಯನ್, ಸರ್ವೋದಯ ವರ್ಕರ್ಸ್ ಖಾದಿ ವರ್ಕರ್ಸ್, ಸರ್ವ ಸೇವಾ ಸಂಘ ಕಾರ್ಯಕರ್ತರ ಎರಡು ದಿನಗಳ ಸಮಾವೇಶವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಅನೇಕ ಉನ್ನತ ಧಾರ್ಮಿಕ ಸಂಸ್ಥೆಗಳನ್ನು ಹೊಂದಿ, ಹಲವು ಸಂತರು, ಧಾರ್ಮಿಕರು ಜೀವಿಸುತ್ತಿರುವ ಈ ಪುಣ್ಯ ಭೂಮಿಯು ಶಾಂತಿಯಿಂದ ಇರುವುದರ ಬಗ್ಗೆ ನನಗೆ ಆಸಕ್ತಿ ವಿನಹ, ಸಣ್ಣ ಮನಸ್ಸಿನ ರಾಜಕಾರಣದ ಮೇಲಿಲ್ಲ ಎಂದರು. ಹಿಂದಿನ ಕಾಲದಲ್ಲಿಯೇ ಜನರಲ್ಲಿ ವೈಚಾರಿಕ ಚಿಂತನೆಯನ್ನು ಬೆಳೆಸಿ, ಬುದ್ಧ, ಜೈನ ಮಹಾವೀರ ತೋರಿಸಿದ ಮಾರ್ಗದಲ್ಲಿ ನಡೆದ ಗಾಂಧೀಜಿ ಒಬ್ಬ ಉತ್ತಮ ಪ್ರವಾದಿ ಎಂದು ಪರಿಗಣಿಸುತ್ತೇವೆ. ಕಮ್ಯೂನಿಸ್ಟ್ ಸಿದ್ಧಾಂತ, ಜಾತೀಯತೆ, ಧಾರ್ಮಿಕ ಮೂಲಭೂತವಾದವನ್ನು ಯಾವತ್ತೂ ಒಪ್ಪದೆ, ಅಹಿಂಸಾ ಮಾರ್ಗದಲ್ಲಿ ಅವರು ನಡೆದರು. ನಮ್ಮ ರಾಜಕಾರಣಿಗಳು ಅವರಂತಾಗಬೇಕು ಎಂದರು.

ಅಖಿಲ ಭಾರತ ಸರ್ವ ಸೇವಾ ಸಂಘದ ಅಧ್ಯಕ್ಷರಾದ ಡಾ. ಸುಗಣ್ ಬರಂತ್ ಮಾತನಾಡಿ, ಬಡತನದ ಹಿಡುಗಿನಿಂದಾಗಿ ಯುವಕರು ಇಂದು ಮಾರಕಾಸ್ತ್ರಗಳನ್ನು ಹಿಡಿದಿರುವುದನ್ನು ನೋಡುತ್ತಿದ್ದೇವೆ. ಹಿಂದೆ ಪ್ರತಿಭಟನೆಯನ್ನು ಮಾಡುತ್ತಿದ್ದಾಗ ಸರ್ಕಾರ ಅದಕ್ಕೆ ಸ್ಪಂದಿಸುತ್ತಿತ್ತು. ಆದರೆ ಇಂದಿನ ಸರ್ಕಾರ ಅನ್ಯಾಯದ ವಿರುದ್ಧ ದನಿ ಎತ್ತಿ ಹೋರಾಟವನ್ನು ಮಾಡುತ್ತಿರುವವರನ್ನು ಯಾವುದಾದರೊಂದು ಆರೋಪದ ಮೇಲೆ ಜೈಲಿಗೆ ತಳ್ಳುತ್ತಿದೆ. ಹೀಗೆ ಪ್ರತಿಭಟನೆಯನ್ನು ಸರ್ಕಾರವು ಹತ್ತಿಕ್ಕುತ್ತಾ ಹೋದರೆ, ಜನರಲ್ಲಿ ಅಹಿಂಸೆಯ ಬಗ್ಗೆ ಯಾವುದೇ ಆಸಕ್ತಿ ಇರುವುದಿಲ್ಲವೆಂದು ಎಂದು ತಿಳಿಸಿದರು.

ಸಮಾವೇಶದಲ್ಲಿ ಕರ್ನಾಟಕ ಸರ್ವೋದಯ ಮಂಡಲದ ಅಧ್ಯಕ್ಷ ಡಾ. ಎಚ್.ಎಸ್. ದೊರೆಸ್ವಾಮಿ, ಕರ್ನಾಟಕ ಗಾಂಧಿ ಸ್ಮಾರಕದ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ, ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ. ಕೃಷ್ಣ ಮತ್ತಿತರರು ಹಾಜರಿದ್ದರು.

ಪ್ರಜಾವಾಣಿ
ಭಾನುವಾರ, 9ನೇ ಆಗಸ್ಟ್ 2009

### ರಾಜ್ಯಪಾಲ ಎಚ್.ಆರ್. ಭಾರದ್ವಾಜ್ ಅಭಿಪ್ರಾಯ

# 'ಗಾಂಧಿ ತತ್ವದಲ್ಲಿ ಅಶಾಂತಿಗೆ ಪರಿಹಾರ'

ಬೆಂಗಳೂರು: 'ಇಡೀ ವಿಶ್ವವೇ ಅಶಾಂತಿ, ಅಭದ್ರತೆ, ಅರಾಜಕತೆ ಮತ್ತು ಪರಸ್ಪರ ಕಚ್ಚಾಟದಿಂದ ನಲುಗುತ್ತಿದೆ. ಅದಕ್ಕೆ ಮಹಾತ್ಮ ಗಾಂಧಿಯವರ ತತ್ವ ಮತ್ತು ಬೋಧನೆಗಳು ಮಾತ್ರ ಪರಿಹಾರ ನೀಡಬಲ್ಲವು' ಎಂದು ರಾಜ್ಯಪಾಲ ಎಚ್.ಆರ್.ಭಾರದ್ವಾಜ್ ಅಭಿಪ್ರಾಯಪಟ್ಟರು.

ಕರ್ನಾಟಕ ಸರ್ವೋದಯ ಮಂಡಲ ಅಡ್ಹಾಕ್ ಸಮಿತಿ ಗಾಂಧಿಯನ್, ಸರ್ವೋದಯ, ಖಾದಿ, ಸರ್ವ ಸೇವಾ ಸಂಘದ ಕಾರ್ಯಕರ್ತರಿಗೆ ಶನಿವಾರ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಎರಡು ದಿನಗಳ ಸಮಾವೇಶ ಉದ್ದೇಶಿಸಿ ಮಾತನಾಡಿದರು.

ಗಾಂಧಿಯನ್ ಸಂಘಟನೆ, ಸರ್ವೋದಯ ಸಂಘ, ಖಾದಿ ಕಾರ್ಯಕರ್ತರ ಸಂಘಟನೆ, ಸರ್ವ ಸೇವಾ ಸಂಘಗಳು ಇಂದಿಗೂ ಗಾಂಧೀಜಿಯ ತತ್ವ-ವಿಚಾರಗಳನ್ನು ಪಾಲಿಸುತ್ತಿರುವುದು ಸಂತೋಷದ ಸಂಗತಿ ಎಂದರು.

ಕೇಂದ್ರದ ಮಾಜಿ ಸಚಿವ ಜಾಫರ್ ಷರೀಫ್, ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ, ಅಖಿಲ ಭಾರತ ಸರ್ವ ಸೇವಾ ಸಂಘದ ಅಧ್ಯಕ್ಷ ಡಾ.ಸುಗನ್ ಬರಂತ್, ಹಿರಿಯ ಗಾಂಧಿವಾದಿ ಮತ್ತು ಕರ್ನಾಟಕ ಸರ್ವೋದಯ ಮಂಡಲ ಅಡ್ಹಾಕ್ ಸಮಿತಿ ಅಧ್ಯಕ್ಷ ಡಾ.ಎಚ್.ಎಸ್.ದೊರೆಸ್ವಾಮಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಹಾಗೂ ಗಾಂಧಿವಾದಿಗಳು ಸಮಾವೇಶದಲ್ಲಿ ಭಾಗವಹಿಸಿದ್ದರು.




ಕರ್ನಾಟಕ ಸರ್ವೋದಯ ಮಂಡಳಿ ಅಡ್ಹಾಕ್ ಸಮಿತಿ ಶನಿವಾರ ಗಾಂಧಿ ಭವನದಲ್ಲಿ ಗಾಂಧಿ ಸೇವಾ ಸಂಸ್ಥೆಗಳಿಗೆ ಹಮ್ಮಿಕೊಂಡ 2 ದಿನಗಳ ಸಮಾವೇಶದಲ್ಲಿ ರಾಜ್ಯಪಾಲ ಎಚ್.ಎಸ್.ಭಾರದ್ವಾಜ್ ಜೀರ್ಣೋದ್ಧಾರಗೊಂಡ ಖಾದಿ ಎಂಪೋರಿಯಂ ಉದ್ಘಾಟಿಸಿದರು. ಅಖಿಲ ಭಾರತ ಸರ್ವ ಸೇವಾ ಸಂಘದ ಅಧ್ಯಕ್ಷ ಡಾ.ಸುಗನ್ ಬರಂತ್ ಅವರು ಚಿತ್ರದಲ್ಲಿದ್ದಾರೆ. —ಪ್ರಜಾವಾಣಿ ಚಿತ್ರ

# ಎಂಬಿಎ ಕಲಿಕೆಗೆ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್

ಶೇಷಾದ್ರಿಪುರಂ ಇನ್ಸಿಟ್ಯೂಟ್ ಸಂಸ್ಥೆ ಸುಮಾರು 79 ವರ್ಷಗಳ ಇತಿಹಾಸವುಳ್ಳ ಪ್ರತಿಷ್ಠಿತ ಸಂಸ್ಥೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ಶಿಕ್ಷಣ ಕ್ಷೇತ್ರದಲ್ಲಿ ಕಳೆದ 80 ವರ್ಷಗಳಿಂದ ಸೇವೆ ನಡೆಸುತ್ತಿರುವ ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್ ಆಯಾ ಕಾಲಕ್ಕೆ ತಕ್ಕಂತೆ ತನ್ನ ವಿದ್ಯಾಸಂಸ್ಥೆಯನ್ನು ವಿಸ್ತರಿಸುತ್ತಾಬಂದಿದೆ. 1930ರಲ್ಲಿ ಪ್ರಾರಂಭವಾದ ಈ ಸಂಸ್ಥೆ, ಪ್ರಾಥಮಿಕ ಶಿಕ್ಷಣ, ಪಿ.ಯು.ಸಿ, ಮ್ಯಾನೇಜ್‌ಮೆಂಟ್, ಪ್ರಥಮ ದರ್ಜೆ ಕಾಲೇಜು, ಸಂಜೆ ಕಾಲೇಜು, ಕಾನೂನು ಕಾಲೇಜು, ಹೀಗೆ ಎಂ.ಬಿ.ಎ ಕೂಡ ಆರಂಭಿಸಿದೆ.



ಈ ಸಂಸ್ಥೆಯ ಕಾಲೇಜುಗಳಲ್ಲಿ ಸುಮಾರು 30% ನಷ್ಟು ಭಾರತದ ಬೇರೆ ಬೇರೆ ರಾಜ್ಯಗಳಲ್ಲದೆ ವಿದೇಶಗಳಿಂದಲೂ ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ನುರಿತ ಪ್ರಾಧ್ಯಾಪಕರ ವರ್ಗ, ವಿಶಿಷ್ಟ ಭೋಧನ ಶೈಲಿ, ಪ್ರತಿಯೊಬ್ಬ ವಿದ್ಯಾರ್ಥಿಯ ಶೈಕ್ಷಣಿಕ ಮತ್ತು ವ್ಯಕ್ತಿತ್ವ ವಿಕಾಸದೊಂದಿಗೆ ಒಬ್ಬ ಪ್ರಜ್ಞಾವಂತ ನಾಗರೀಕನನ್ನಾಗಿ ಮಾಡುವಲ್ಲಿ ಸಹಕಾರಿಯಾಗಿದೆ. ಬೆಂಗಳೂರಿನ ಶೇಷಾದ್ರಿಪುರಂನಲ್ಲಿ ಪ್ರೀ ಯೂನಿವರ್ಸಿಟಿ ಕಾಲೇಜು, ಯಲಹಂಕದಲ್ಲಿ ಪ್ರೀ ಯೂನಿವರ್ಸಿಟಿ ಕಾಲೇಜುಗಳನ್ನೊಳಗೊಂಡಂತೆ ಬೆಂಗಳೂರಿನ ಹಲವಾರು ಕಡೆಗಳಲ್ಲಿ ಉನ್ನತ ಶಿಕ್ಷಣ ಸಂಸ್ಥೆಯನ್ನು ವಿಸ್ತರಿಸಿದೆ.

ಶೇಷಾದ್ರಿಪುರಂ ಇನ್ಸಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್ 2001ರಲ್ಲಿ ಯಲಹಂಕದ ಕಾಲೇಜಿನಲ್ಲಿ ಎಂ.ಬಿ.ಎ ಆರಂಭಿಸಿತು. ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ಈ ಹೊಸ ಕ್ಯಾಂಪಸ್‌ನಲ್ಲಿ ಉತ್ತಮ ವಿನ್ಯಾಸದ ಅಂತಾರಾಷ್ಟ್ರೀಯ ಮಟ್ಟದ ಸೌಕರ್ಯಗಳನ್ನೊಳಗೊಂಡು ಸುಸಜ್ಜಿತ ಕಂಪ್ಯೂಟರ್ ಲ್ಯಾಬ್, ಕ್ಲಾಸ್‌ರೂಮ್, ಸೆಮಿನಾರ್ ಹಾಲ್, ಬೃಹತ್ ಅಚ್ಚುಕಟ್ಟಾದ ಗ್ರಂಥಾಲಯ, ಮುಂತಾದ ಸೌಲಭ್ಯಗಳನ್ನೊಳಗೊಂಡಿದೆ.



ಎಂ.ಬಿ.ಎ ಗೆ ಸಂಬಂಧಪಟ್ಟಂತೆ ಮಾಹಿತಿಪೂರ್ಣ ಸೆಮಿನಾರ್‌ಗಳು, ವಿದ್ಯಾರ್ಥಿಗಳ ಬೆಳವಣಿಗೆಗೆ ಮಹತ್ತರ ಪಾತ್ರವಹಿಸುತ್ತದೆ. ಉನ್ನತ ಮಟ್ಟದ ಸೌಲಭ್ಯಗಳು ಅತ್ಯುತ್ತಮ ಶೈಕ್ಷಣಿಕ ವಾತಾವರಣವನ್ನು ಒಳಗೊಂಡಿರುವ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಒಂದು ಮಾದರಿ ಸಂಸ್ಥೆಯಾಗಿ ಗುರುತಿಸಿಕೊಂಡಿದೆ ಎಂಬುದು ಈ ಸಂಸ್ಥೆಯ ಹೆಗ್ಗಳಿಕೆಯಾಗಿದೆ. ಎಂ.ಬಿ.ಎ ತರಗತಿಯನ್ನು 2001ರಲ್ಲಿ ಆರಂಭಿಸಲಾಯಿತು. ಇಲ್ಲಿ 2 ವರ್ಷಗಳ ಎಂ.ಬಿ.ಎ ಡಿಗ್ರಿಯನ್ನು ಬೆಂಗಳೂರು ವಿಶ್ವವಿದ್ಯಾನಿಲಯದ ನಿಯಮಗಳಿಗೊಳಪಟ್ಟು ಶೇ. 50% ಸೀಟುಗಳನ್ನು ಪಿ.ಜಿ, ಸಿ.ಇ.ಟಿ ಮತ್ತು ಶೇ. 50% ಸೀಟುಗಳನ್ನು ಆಡಳಿತ ಮಂಡಳಿ ಮೂಲಕ ಭರ್ತಿಗೊಳಿಸಲಾಗುತ್ತದೆ.

ಎಂ.ಬಿ.ಎ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಬಹುಮಾಧ್ಯಮ ಕಂಪ್ಯೂಟರ್ ಸೆಂಟರ್ ಒಳಗೊಂಡಿದೆ. ವಿಡಿಯೋ ಕಾನ್ಫರೆನ್ಸಿಂಗ್ ಸೌಲಭ್ಯವನ್ನು ಒಳಗೊಂಡತೆ, ಈ ಮೂಲಕ ವಿದ್ಯಾರ್ಥಿಗಳು ವ್ಯಾಪಾರ ನಿರ್ವಹಣೆಯನ್ನು ಕಲಿಯುವುದರ ಜೊತೆಗೆ ಉನ್ನತಮಟ್ಟದ ವೃತ್ತಿಪರರ ಅನುಭವವನ್ನು ಕೇಳಿ, ಕಲಿತುಕೊಳ್ಳಲು ಸಾಧ್ಯವಾಗುತ್ತಿದೆ. ಉನ್ನತ ಮಟ್ಟದ ಉದ್ಯಮಗಳಿಗೆ ಭೇಟಿ ಇವೆ ಮೊದಲಾದವುಗಳೊಂದಿಗೆ ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ಪಠ್ಯೇತರ ಚಟುವಟಿಕೆಗಳಿಗೂ ಪ್ರೋತ್ಸಾಹ ನೀಡಲಾಗುತ್ತದೆ. ಉತ್ತಮ ಸೌಲಭ್ಯ, ಅಧ್ಯಾಪಕ ತಂಡದ ಪರಿಶ್ರಮದಿಂದಾಗಿ ಇಲ್ಲಿನ ವಿದ್ಯಾರ್ಥಿಗಳು ತಮ್ಮ ಕ್ಷೇತ್ರದಲ್ಲಿ ಪರಿಪೂರ್ಣರಾಗಿ ಹೊರ ಹೊಮ್ಮುತ್ತಿದ್ದಾರೆ. ಎಂ.ಬಿ.ಎ ಕೋರ್ಸಿನ ಎರಡು ವರ್ಷಗಳಲ್ಲಿ ನಾಲ್ಕು ಸೆಮಿಸ್ಟರ್‌ಗಳಾಗಿರುತ್ತದೆ. ಇಲ್ಲಿನ ಇನ್ಸಿಟ್ಯೂಟ್ ಮ್ಯಾನೇಜ್ ಮೆಂಟ್ ಕಾಲೇಜಿನ ಅಧ್ಯಕ್ಷರಾದ ಎನ್.ಆರ್. ಪಂಡಿತಾ ಆರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಹಾಗೂ ಎಂ.ಬಿ.ಎ ಡೈರೆಕ್ಟರ್ ಡಾ. ಡಿ.ಕೆ. ಮೂರ್ತಿ ಈ ಸಂಸ್ಥೆಯ ಬೆನ್ನೆಲುಬಾಗಿದ್ದಾರೆ. ಈ ಎರಡೂ ವರ್ಷದ ತರಗತಿಯಲ್ಲಿ ವಿಶಿಷ್ಟ ಸ್ವರೂಪದಲ್ಲಿ ಶಿಕ್ಷಣ, ತರಬೇತಿ ನೀಡುವಲ್ಲಿ ಈ ಸಂಸ್ಥೆ ಯಶಸ್ವಿಯಾಗಿದೆ. ಅಲ್ಲದೇ ಶೈಕ್ಷಣಿಕ ಉತ್ಕೃಷ್ಟತೆ ನಮ್ಮ ಸಂಸ್ಥೆ ಇನ್ನೊಂದು ಹೆಸರಾಗಿದೆ ಎನ್ನುತ್ತಾರೆ.

ಇನ್ನಷ್ಟು ಮಾಹಿತಿಗಾಗಿ ಸಂಪರ್ಕಿಸಿ : ಶೇಷಾದ್ರಿಪುರಂ ಇನ್ಸಿಟ್ಯೂಷನ್ ಆಫ್ ಮ್ಯಾನೇಜ್ ಮೆಂಟ್ ಸ್ಟಡೀಸ್, ಸಿ.ಎ. ಸೈಟ್ ನಂ. 26, ಯಲಹಂಕ ನ್ಯೂ ಟೌನ್, ಬೆಂಗಳೂರು - 64. ದೂರವಾಣಿ : 22955369/71, ಫ್ಯಾಕ್ಸ್ : 22955370.

ಬೆಂಗಳೂರು ವಿಜಯ | ಮಂಗಳವಾರ, 4 ಆಗಸ್ಟ್, 2009

# ಸಮಾಜಮುಖಿಯಾಗಲು ವಿದ್ಯಾರ್ಥಿಗಳಿಗೆ ಕರೆ



**ಶೇಷಾದ್ರಿಪುರ ವಾಣಿಜ್ಯ ಪದವಿ ಕಾಲೇಜಿನ ವಿದ್ಯಾರ್ಥಿಗಳಿಗಾಗಿ ಆಯೋಜಿಸಿದ್ದ ಮಾರ್ಗದರ್ಶನ ಉದ್ಘಾಟನಾ ಸಮಾರಂಭದಲ್ಲಿ ಡಾ. ಪಿ. ಪರಮಶಿವಯ್ಯ, ವೂಡೇ ಪಿ. ಕೃಷ್ಣ, ಪಂಡಿತಾರಾಧ್ಯ, ಸರೋಜಾ ನಂಜಪ್ಪ ಜಯಶ್ರೀ ಜೆ. ಸಿಂಗ್ ಉಪಸ್ಥಿತರಿದ್ದರು.**

ಬೆಂಗಳೂರು: ವಿದ್ಯಾರ್ಥಿಗಳು ಸಮಾಜಮುಖಿಗಳಾಗಬೇಕು ಎಂದು ಆರ್.ಸಿ. ಕಾಲೇಜಿನ ಸ್ನಾತಕೋತ್ತರ ಕೇಂದ್ರದ ಡಾ. ಪಿ. ಪರಮಶಿವಯ್ಯ ಕರೆ ನೀಡಿದರು.

ಮಾಗಡಿ ರಸ್ತೆಯ ಶೇಷಾದ್ರಿಪುರ ವಾಣಿಜ್ಯ ಪದವಿ ಕಾಲೇಜಿನಲ್ಲಿ ನೂತನ ವಿದ್ಯಾರ್ಥಿಗಳಿಗಾಗಿ ಆಯೋಜಿಸಿದ್ದ ಮಾರ್ಗದರ್ಶನ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ವಾಣಿಜ್ಯ ವಿಷಯದ ವಿದ್ಯಾರ್ಥಿಗಳಿಗೆ ಇರುವ ಉನ್ನತ ವಿದ್ಯಾಭ್ಯಾಸದ ಅವಕಾಶಗಳು ಹಾಗೂ ಹೆಚ್ಚುತ್ತಿರುವ ಉದ್ಯೋಗಾವಕಾಶಗಳ ಬಗ್ಗೆ ತಿಳಿಸಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿ ಅಧ್ಯಕ್ಷ ಪಂಡಿತಾರಾಧ್ಯ, ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಉಪ ಕಾರ್ಯದರ್ಶಿ ಸರೋಜಾ ನಂಜಪ್ಪ, ಆಡಳಿತ ಮಂಡಳಿ ಸದಸ್ಯ ಗೋಪಾಲ್, ಪ್ರಿನ್ಸಿಪಾಲ್ ಜಯಶ್ರೀ ಜೆ. ಸಿಂಗ್ ಭಾಗವಹಿಸಿದ್ದರು.

ಪ್ರಜಾವಾಣಿ

ಬುಧವಾರ
29ನೇ ಜುಲೈ 2009

**3A B**



## ಉದ್ಘಾಟನೆ

ಬೆಂಗಳೂರಿನ ಶೇಷಾದ್ರಿಪುರ ಸಂಜೆ ಪದವಿ ಕಾಲೇಜಿನಲ್ಲಿ ಇತ್ತೀಚೆಗೆ ನಡೆದ ಪ್ರಥಮ ವರ್ಷದ ವಿದ್ಯಾರ್ಥಿಗಳ ಸ್ವಾಗತ ಸಮಾರಂಭವನ್ನು ಬೇಲಿಮಠದ ಶಿವರುದ್ರ ಸ್ವಾಮೀಜಿ ಉದ್ಘಾಟಿಸಿದರು, ಪ್ರಾಚಾರ್ಯ ಪ್ರೊ.ಗಾಂಧಿ ಡಿ. ಪ್ರಭು, ಶೇಷಾದ್ರಿಪುರ ಶಿಕ್ಷಣ ದತ್ತಿ ಸಂಸ್ಥೆಯ ಅಧ್ಯಕ್ಷ ವೂಡೇ ಪಿ.ಕೃಷ್ಣ, ಗೌರವ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಇದ್ದರು.

ಬೆಂಗಳೂರು ವಿಜಯ | ಬುಧವಾರ, 29 ಜುಲೈ 2009

# ವೂಡೆ ಕೃಷ್ಣ ಸಾಧನೆ ಶ್ಲಾಘನೆ

ಬೆಂಗಳೂರು: ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪವೇ ವೂಡೆ ಪಿ. ಕೃಷ್ಣ ಎಂದು ಕವಯಿತ್ರಿ ರಾಣಿ ಗೋವಿಂದರಾಜು ಅಭಿಪ್ರಾಯಪಟ್ಟರು.

ರಾಜ್ಯ ಸರಕಾರ ಸಚಿವಾಲಯ ಕ್ಲಬ್‌ನ ಅಧ್ಯಯನ ಗೋಷ್ಠಿಯಲ್ಲಿ 'ವೂಡೆ ಪಿ. ಕೃಷ್ಣ ಸಾಧನೆಯ ಮೈಲುಗಲ್ಲು' ಕುರಿತು ಉಪನ್ಯಾಸ ನೀಡಿ ಅವರು ಮಾತನಾಡಿದರು.

ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಶ್ರೀಸಾಮಾನ್ಯರ ಸಮಸ್ಯೆಗಳ ಬಗ್ಗೆ ಪತ್ರಿಕೆಗಳಿಗೆ ಬರೆದು ಸರಕಾರದ, ಸ್ಥಳೀಯ ಸಂಸ್ಥೆಗಳ ಗಮನ ಸೆಳೆಯುತ್ತಿದ್ದ ವೂಡೆ ಪಿ. ಕೃಷ್ಣ ಅವರು ಈಗಲೂ ಆ ಕೆಲಸವನ್ನು ಮುಂದುವರಿಸಿದ್ದಾರೆ. ಕನ್ನಡ ನಾಡಿನ ಉನ್ನತ ಸಂಸ್ಕೃತಿಯ ಪ್ರತೀಕವಾದ, ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪವೆನಿಸಿಕೊಂಡಿರುವ ಇಂತಹ ಮಹಾನ್ ವ್ಯಕ್ತಿ ನಮ್ಮ ನಡುವೆ ಇರುವುದು ನಮ್ಮ ಪುಣ್ಯ ಎಂದರು.

ಅತ್ಯಂತ ಕಿರಿಯ ವಯಸ್ಸಿನಲ್ಲೇ ಬಹಳ ಹಿರಿದಾದ ಸಾಧನೆ ಮಾಡಿರುವ ವೂಡೆ ಪಿ. ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆ, ಗಾಂಧಿ ಶಾಂತಿ ಪ್ರತಿಷ್ಠಾನ, ಸೇವಾದಳ, ಬಸವಸಮಿತಿ, ಬ್ರಹ್ಮಸಮಾಜ ಮತ್ತಿತರ ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ಕಾಯಾ, ವಾಚಾ, ಮನಸಾ ತೊಡಗಿಸಿಕೊಂಡು ಪ್ರಾಮಾಣಿಕ ಸಮಾಜ ಸೇವೆ ಮಾಡುತ್ತಿದ್ದಾರೆ. ಸ್ವತಃ ರಕ್ತದಾನಿಯಾಗಿದ್ದು ಮಹತ್ವವನ್ನು ಅವರು ಪ್ರಚುರ ಪಡಿಸುತ್ತಾ ಬಂದಿದ್ದಾರೆ ಎಂದು ತಿಳಿಸಿದರು.

ರಾಜ್ಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ ಸೇರಿದಂತೆ ನೂರಾರು ಪ್ರಶಸ್ತಿಗಳನ್ನು ಪಡೆದು, ತನ್ನ ನಿಸ್ವಾರ್ಥ ಮಾನವೀಯ ಸೇವೆಯಿಂದ ಎಲ್ಲರಿಗೂ ವಿಶೇಷವಾಗಿ ಯುವಕರಿಗೆ ಮಾದರಿಯಾಗಿರುವ ವೂಡೆ ಪಿ. ಕೃಷ್ಣ ಅವರ ಯಶಸ್ಸಿನ ಹಿಂದೆ ಅವರ ತಾತ ಡಬ್ಲ್ಯು. ಎಚ್. ಹನುಮಂತಪ್ಪ ತಂದೆ ಡಬ್ಲ್ಯು.ಎಚ್. ಪುಟ್ಟಯ್ಯ, ತಾಯಿ ದೊಡ್ಡಮ್ಮಯ್ಯ, ಪತ್ನಿ ಸವಿತಾ ಮತ್ತಿತರರಿದ್ದಾರೆ ಎಂದು ನುಡಿದರು.

ಜಗಜ್ಯೋತಿ ಬಸವೇಶ್ವರ, ರಾಮಕೃಷ್ಣ ಪರಹಮಹಂಸ, ವಿವೇಕಾನಂದ, ಗಾಂಧೀಜಿ, ಟಿ. ಸಿದ್ದಲಿಂಗಯ್ಯ ಮತ್ತಿತರರಿಂದ ತಮ್ಮ ಬದುಕಿಗೆ ಸ್ಫೂರ್ತಿ ಪಡೆದಿದ್ದಾರೆ. ಬಿಎಂಎಸ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ, ಈಗ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಗೌರವ ಕಾರ್ಯದರ್ಶಿಯಾಗಿ ಶಿಕ್ಷಣ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ ಎಂದು ಹೇಳಿದರು.

ಸಭೆಯಲ್ಲಿ ವೂಡೆ ಪಿ. ಕೃಷ್ಣ ಅವರನ್ನು ಸಂಧ್ಯಾ ದೀಪದ ಅಧ್ಯಕ್ಷೆ ರುದ್ರಾಣಿ ಜಿ.ಎಸ್. ಶಿವರುದ್ರಪ್ಪ ಅವರು ಸನ್ಮಾನಿಸಿದರು. ಸರೋಜಮ್ಮ ಕೆ.ಎಂ. ನಂಜಪ್ಪ ದ್ವಾರನಕುಂಟೆ ಪಾತಣ್ಣ, ಬಿ.ಪಿ. ಚಂದ್ರಶೇಖರ್ ಉಪಸ್ಥಿತರಿದ್ದರು. ಡಿ.ಕೆ. ನಾಗರಾಜ್ ಕಾರ್ಯಕ್ರಮ ನಿರೂಪಿಸಿದರು. ರಾಜನ್ ಪ್ರಾರ್ಥಿಸಿದರು.



**'ವೂಡೆ ಪಿ. ಕೃಷ್ಣ ಸಾಧನೆಯ ಮೈಲುಗಲ್ಲು' ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ವೂಡೆ ಪಿ. ಕೃಷ್ಣ, ರಾಣಿ ಗೋವಿಂದರಾಜು, ಸರೋಜಮ್ಮ ಕೆ.ಎಂ. ನಂಜಪ್ಪ, ರುದ್ರಾಣಿ ಜಿ.ಎಸ್. ಶಿವರುದ್ರಪ್ಪ ಉಪಸ್ಥಿತರಿದ್ದರು.**

ಕನ್ನಡಪ್ರಭ, ಮಂಗಳವಾರ, 28 ಜುಲೈ 2009



## ಪ್ರತಿಭಾ ಪುರಸ್ಕಾರ

ಶೇಷಾದ್ರಿಪುರ ಸಂಜೆ ಪದವಿ ಕಾಲೇಜು ಹಮ್ಮಿಕೊಂಡಿದ್ದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವನ್ನು ಶಿವರುದ್ರ ಮಹಾಸ್ವಾಮಿ ಉದ್ಘಾಟಿಸಿದರು. ಪ್ರೊ/ಗಾಂಧಿ ಡಿ. ಪ್ರಭು, ಪ್ರೊಡೇ.ಪಿ.ಕೃಷ್ಣ, ಎನ್.ಆರ್.ಪಂಡಿತಾರಾಧ್ಯ, ಸರೋಜಮ್ಮ ನಂಜಪ್ಪ ಹಾಜರಿದ್ದರು.

ಉದಯವಾಣಿ
ಜುಲೈ 26, 2009

# 'ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪವೇ ವೂಡೆ ಪಿ. ಕೃಷ್ಣ'

ಹಲಸೂರು

ಕನ್ನಡ ನಾಡಿನ ಉನ್ನತ ಸಂಸ್ಕೃತಿಯ ಪ್ರತೀಕವಾದ, ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪ ಎನಿಸಿಕೊಂಡಿರುವ ಇಂತಹ ಮಹಾನ್ ವ್ಯಕ್ತಿ ನಮ್ಮ ನಡುವೆ ಇರುವುದು ನಮ್ಮ ಪುಣ್ಯ" ಎಂದು ಕವಯತ್ರಿ, ಸಮಾಜ ಸೇವಕಿ ರಾಣಿ ವಿ. ಗೋವಿಂದರಾಜು ಅಭಿಪ್ರಾಯಪಟ್ಟರು. ಅವರು ಕರ್ನಾಟಕ ಸರ್ಕಾರ ಸಚಿವಾಲಯ ಕ್ಲಬ್‌ನ ಅಧ್ಯಯನ ಗೋಷ್ಠಿಯಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡಿದರು. ಕಿರಿಯ ವಯಸ್ಸಿನಲ್ಲೇ ಹಿರಿದಾದ ಸಾಧನೆ ಮಾಡಿರುವ ವೂಡೆ ಪಿ.ಕೃಷ್ಣ ರೆಡ್ ಕ್ರಾಸ್ ಸಂಸ್ಥೆ, ಗಾಂಧಿ ಶಾಂತಿ ಪ್ರತಿಷ್ಠಾನ, ಸೇವಾದಳ, ಬಸವಸಮಿತಿ, ಬ್ರಹ್ಮಸಮಾಜ ಮೊದಲಾದ ಸಂಘ ಸಂಸ್ಥೆಗಳಲ್ಲಿ ಸಮಾಜ ಪ್ರಚುರಪಡಿಸುತ್ತಾ ಬಂದಿದ್ದಾರೆ.

ರಾಣಿಗೋವಿಂದರಾಜು 'ವೂಡೆ ಪಿ.ಕೃಷ್ಣ ಸಾಧನೆಯ ಮೈಲಿಗಲ್ಲು' ಕುರಿತು ಉಪನ್ಯಾಸ ನೀಡಿದರು. ಕರ್ನಾಟಕ ರಾಜ್ಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ ಸೇರಿದಂತೆ ನೂರಾರು ಪ್ರಶಸ್ತಿಗಳನ್ನು ಪಡೆದು, ತನ್ನ ನಿಸ್ವಾರ್ಥ ಮಾನವೀಯ ಸೇವೆಯಿಂದ ಎಲ್ಲರಿಗೂ ವಿಶೇಷವಾಗಿ ಯುವಕರಿಗೆ ಮಾದರಿಯಾಗಿರುವ ಡಬ್ಲ್ಯು.ಪಿ. ಕೃಷ್ಣ ಅವರ ಯಶಸ್ಸಿನ ಹಿಂದೆ ಅವರ ತಾತ ಡಬ್ಲ್ಯು. ಎಚ್. ಹನುಮಂತಪ್ಪ, ತಂದೆ ಡಬ್ಲ್ಯು.ಎಚ್. ಪುಟ್ಟಯ್ಯ, ತಾಯಿ ಡಿ. ದೊಡ್ಡಮ್ಮಯ್ಯ, ಪತ್ನಿ ಸವಿತಾ ಮೊದಲಾದವರಿದ್ದಾರೆ ಎಂದರು.

ಸಭೆಯಲ್ಲಿ ವೂಡೆ ಪಿ.ಕೃಷ್ಣ ಅವರನ್ನು ಸಂಧ್ಯಾದೀಪದ ಅಧ್ಯಕ್ಷೆ ರುದ್ರಾಣಿ ಜಿ.ಎಸ್. ಶಿವರುದ್ರಪ್ಪ ಸನ್ಮಾನಿಸಿದರು. ಸರೋಜಮ್ಮ ಕೆ.ಎಂ.ನಂಜಪ್ಪ, ದ್ವಾರನಕುಂಟೆ ಪಾತಣ್ಣ, ಬಿ.ಪಿ. ಚಂದ್ರಶೇಖರ್ ಅವರೂ ಮಾತನಾಡಿದರು. ಡಿ.ಕೆ. ನಾಗರಾಜ್ ನಿರೂಪಿಸಿದರು. ಜಿ.ಕೆ.ಎಲ್. ರಾಜನ್ ಪ್ರಾರ್ಥಿಸಿದರು. ಆರ್. ಅನಂತಮೂರ್ತಿ, ರಾಣಿಗೋವಿಂದರಾಜು ಅವರ ಕವನಗಳನ್ನು ಹಾಡಿದರು.

ಉದಯವಾಣಿ ಗುರುವಾರ 13 ಆಗಸ್ಟ್ 2009

# ಹಳ್ಳಿ ಜನರ ಆರೋಗ್ಯ ಸುಧಾರಣೆಗೆ ಒತ್ತು ಕೊಡಿ: ಭಾರದ್ವಾಜ್

ಬೆಂಗಳೂರು, ಆ. 12: ಗ್ರಾಮೀಣ ಭಾಗದ ಬಡಜನರ ಆರೋಗ್ಯ ಸುಧಾರಣೆಗೆ ಹೆಚ್ಚು ಗಮನ ನೀಡುವಂತೆ ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಇಂದು ಭಾರತೀಯ ರೆಡ್ ಕ್ರಾಸ್‌ನ ರಾಜ್ಯ ಘಟಕಕ್ಕೆ ಸಲಹೆ ಮಾಡಿದರು.

ರೆಡ್ ಕ್ರಾಸ್ ಸಂಸ್ಥೆ ಆಯೋಜಿಸಿದ್ದ ಜಿನಿವಾ ಒಪ್ಪಂದ ದಿನದ 60ನೇ ವಾರ್ಷಿಕೋತ್ಸವ ಹಾಗೂ 'ರೆಡ್‌ಕ್ರಾಸ್ ಅಮೆಚ್ಯೂರ್ ರೇಡಿಯೋ ಸ್ಟೇಷನ್ (ಹ್ಯಾಮ್)' ಉದ್ಘಾಟಿಸಿ ಅವರು ಮಾತನಾಡಿದರು.

ಪ್ರಾಕೃತಿಕ ವಿಕೋಪ, ಅಪಘಾತಗಳು, ಮಾನವ ನಿರ್ಮಿತ ಆಪತ್ತುಗಳಿಂದ ತೊಂದರೆಗೆ ಒಳಗಾಗುವ ಜನರ ಸೇವೆ ಹಾಗೂ ರಕ್ತ ನಿಧಿ ಸೇವೆ ಒದಗಿಸುವಲ್ಲಿ ರೆಡ್ ಕ್ರಾಸ್ ಸಂಸ್ಥೆಯ ಸೇವೆ ಶ್ಲಾಘನೀಯ. ಇದರ ಜತೆಗೆ ಗ್ರಾಮಾಂತರ ಭಾಗದ ಜನರ ಸಮಸ್ಯೆಗಳನ್ನು ಗುರುತಿಸಿ ಅವುಗಳ ಪರಿಹಾರಕ್ಕೂ ಸಂಸ್ಥೆ ಹೆಚ್ಚು ಗಮನ ನೀಡಬೇಕು ಎಂದು ಮನವಿ ಮಾಡಿದರು.

ಪ್ರಾಕೃತಿಕ ವಿಪತ್ತುಗಳಿಗೆ ಸಂಬಂಧಿಸಿದಂತೆ ರಾಜ್ಯವು ಸಾಕಷ್ಟು ಸುರಕ್ಷಿತವಾಗಿದೆ. ಈ ಹಿನ್ನೆಲೆಯಲ್ಲಿ ರೆಡ್‌ಕ್ರಾಸ್ ಸಂಸ್ಥೆಯು ತನ್ನ ಕಾರ್ಯಚಟುವಟಿಕೆ ಮತ್ತು ಆದ್ಯತೆಗಳನ್ನು ಬದಲಿಸಿಕೊಳ್ಳಬೇಕು. ನಾಡಿನ ಬಡಜನರ ಆರೋಗ್ಯ ಸೇವೆಯನ್ನು ಬಲಪಡಿಸಲು ಮುಂದಾಗಬೇಕು ಎಂದು ಕಿವಿಮಾತು ಹೇಳಿದರು.

ಸೇವೆಯೇ ಧ್ಯೇಯವನ್ನಾಗಿಸಿಕೊಂಡಿರುವ ರೆಡ್‌ಕ್ರಾಸ್ ಸಂಸ್ಥೆ, ಕ್ಷಯ ರೋಗದ ನಿರ್ಮೂಲನೆ ಕಾರ್ಯದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಬೇಕು. ಕ್ಷಯ ಹಾಗೂ ಮತ್ತಿತರ ಅಂಟು ರೋಗಗಳ ಕುರಿತು ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸಬೇಕಿದೆ ಎಂದರು.

ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ ಮಾತನಾಡಿ, ಸಂಸ್ಥೆಯ ಧ್ಯೇಯ, ಆದರ್ಶಗಳು ಹಾಗೂ ಸೇವಾ ಚಟುವಟಿಕೆಗಳ ಕುರಿತು ವಿವರಿಸಿದರು. ಈ ಸಂಸ್ಥೆಯ ಮೂಲಕ ವಿಶ್ವ ಭ್ರಾತೃತ್ವದ ಸಂದೇಶ ಸಾರಿದ ಹೆನ್ರಿ ಡುನಾಂಟ್ ಅವರು ಸಾಮಾಜಿಕ ನ್ಯಾಯದ ಹರಿಕಾರರಾಗಿದ್ದಾರೆ. ಈ ದಾರ್ಶನಿಕರು ಹಾಕಿಕೊಟ್ಟಿರುವ ಮಾರ್ಗದಲ್ಲಿ ಸಂಸ್ಥೆ ಮುನ್ನಡೆಯಲಿದೆ ಎಂದು ಹೇಳಿದರು.

ಸಂಸ್ಥೆಯ ರಾಜ್ಯ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ। ಎನ್.ಜಿ. ನಾರಾಯಣ ಮನ್ನಿತರರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



ಬೆಂಗಳೂರಿನಲ್ಲಿ ಬುಧವಾರ ರೆಡ್ ಕ್ರಾಸ್ ಸಂಸ್ಥೆ ಏರ್ಪಡಿಸಿದ್ದ ಜಿನಿವಾ ಒಪ್ಪಂದ ದಿನದ 60ನೇ ವಾರ್ಷಿಕೋತ್ಸವವನ್ನು ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಉದ್ಘಾಟಿಸಿದರು. ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.

ಈ ಸಂಜೆ 5 ಭಾನುವಾರ, 26 ಜುಲೈ, 2009



ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ವಿದ್ಯಾರ್ಥಿ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಚಿಂತಕ ಡಾ. ಪಿ. ವಿ. ನಾರಾಯಣ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್ .ಆರ್.ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಪ್ರಾಂಶುಪಾಲ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಇತರರು ಉಪಸ್ಥಿತರಿದ್ದರು.

# ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪವೇ ವೂಡೆ ಪಿ.ಕೃಷ್ಣ

-ರಾಣಿ ಗೋವಿಂದರಾಜು



ರುದ್ರಾಣಿ ಜಿ.ಎಸ್.ಶಿವರುದ್ರಪ್ಪ ಮಾತನಾಡುತ್ತಿದ್ದಾರೆ. ವೂಡೆ ಪಿ.ಕೃಷ್ಣ, ರಾಣಿ ಗೋವಿಂದರಾಜು, ಸರೋಜಾ ಕೆ.ಎಂ.ನಂಜಪ್ಪ ಮತ್ತು ಬಿ.ಪಿ.ಚಂದ್ರಶೇಖರ್ ಚಿತ್ರದಲ್ಲಿದ್ದಾರೆ.

"ಅತ್ಯಂತ ಕಿರಿಯ ವಯಸ್ಸಿನಲ್ಲೇ ಬಹಳ ಹಿರಿದಾದ ಸಾಧನೆ ಮಾಡಿರುವ ವೂಡೆ ಪಿ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆ, ಗಾಂಧಿ ಶಾಂತಿ ಪ್ರತಿಷ್ಠಾನ, ಸೇವಾದಳ, ಬಸವಸಮಿತಿ, ಬ್ರಹ್ಮಸಮಾಜ ಮೊದಲಾದ ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ಕಾಯಾ, ವಾಚಾ, ಮನಸಾ ತೊಡಗಿಸಿಕೊಂಡು ಪ್ರಾಮಾಣಿಕ ಸಮಾಜ ಸೇವೆ ಮಾಡುತ್ತಿದ್ದಾರೆ. ಸ್ವತಃ ರಕ್ತದಾನಿಯಾಗಿದ್ದು, ರಕ್ತದಾನದ ಮಹತ್ವವನ್ನು ಪ್ರಚುರಪಡಿಸುತ್ತಾ ಬಂದಿದ್ದಾರೆ. ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯ ಕುಟುಂಬದಿಂದ ಬಂದ ಇವರು ಬಾಲ್ಯದಲ್ಲೇ ಸರ್ವರಿಗೂ ಒಳಿತು ಮಾಡುವ ಮನೋಭಾವ ಬೆಳೆಸಿಕೊಂಡಿದ್ದರು".

"ಜಗಜ್ಯೋತಿ ಬಸವೇಶ್ವರ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗಾಂಧೀಜಿ, ಟಿ.ಸಿದ್ಧಲಿಂಗಯ್ಯ ಮೊದಲಾದವರಿಂದ ಸ್ಫೂರ್ತಿ ಪಡೆದು ಈ ಮಹಾನುಭಾವರ ತತ್ತ್ವಗಳನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಂಡಿದ್ದಾರೆ. ಬಿ.ಎಂ.ಎಸ್. ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಈಗ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಗೌ.ಕಾರ್ಯದರ್ಶಿಯಾಗಿ ಶಿಕ್ಷಣ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ. ೮೦೦ ಸಿಬ್ಬಂದಿ, ೨೦೦೦೦ ವಿದ್ಯಾರ್ಥಿಗಳೇ ತನ್ನ ಸ್ವಂತ ಮಕ್ಕಳೆಂದು ಭಾವಿಸಿ ಅವರ ಕಷ್ಟ, ಸುಖಗಳಲ್ಲಿ ಭಾಗಿಯಾಗುವ ಉದಾತ್ತ ಧ್ಯೇಯ ಇವರದು".

"ಕರ್ನಾಟಕ ರಾಜ್ಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ ಸೇರಿದಂತೆ ನೂರಾರು ಪ್ರಶಸ್ತಿಗಳನ್ನು ಪಡೆದು, ತನ್ನ ನಿಸ್ವಾರ್ಥ ಮಾನವೀಯ ಸೇವೆಯಿಂದ ಎಲ್ಲರಿಗೂ ವಿಶೇಷವಾಗಿ ಯುವಕರಿಗೆ ಮಾದರಿಯಾಗಿರುವ ಡಬ್ಲ್ಯು.ಪಿ.ಕೃಷ್ಣ ಅವರ ಯಶಸ್ಸಿನ ಹಿಂದೆ ಅವರ ತಾತ ಡಬ್ಲ್ಯು.ಎಚ್.ಹನುಮಂತಪ್ಪ, ತಂದೆ ಡಬ್ಲ್ಯು.ಎಚ್.ಪುಟ್ಟಯ್ಯ, ತಾಯಿ ದಿ||ದೊಡ್ಡಮ್ಮಯ್ಯ, ಪತ್ನಿ ಸವಿತಾ ಮೊದಲಾದವರಿದ್ದಾರೆ".

"ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಶ್ರೀಸಾಮಾನ್ಯರ ಸಮಸ್ಯೆಗಳ ಬಗೆಗೆ ಪತ್ರಿಕೆಗಳಿಗೆ ಬರೆದು ಸರ್ಕಾರದ, ಸ್ಥಳೀಯ ಸಂಸ್ಥೆಗಳ ಗಮನ ಸೆಳೆಯುತ್ತಿದ್ದ ವೂಡೆ ಪಿ.ಕೃಷ್ಣ ಅವರು ಈಗಲೂ ಆ ಕೆಲಸವನ್ನು ಮುಂದುವರೆಸಿದ್ದಾರೆ. ಕನ್ನಡ ನಾಡಿನ ಉನ್ನತ ಸಂಸ್ಕೃತಿಯ ಪ್ರತೀಕವಾದ, ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪವೆನಿಸಿಕೊಂಡಿರುವ ಇಂತಹ ಮಹಾನ್ ವ್ಯಕ್ತಿ ನಮ್ಮ ನಡುವೆ ಇರುವುದು ನಮ್ಮ ಪುಣ್ಯ" ಎಂದು ಕವಯತ್ರಿ, ಸಮಾಜ ಸೇವಕಿ ರಾಣಿ ವಿ.ಗೋವಿಂದರಾಜು ಅಭಿಪ್ರಾಯಪಟ್ಟರು.

ಇತ್ತೀಚೆಗೆ, ಕರ್ನಾಟಕ ಸರ್ಕಾರ ಸಚಿವಾಲಯ ಕ್ಲಬ್‌ನ ಅಧ್ಯಯನ ಗೋಷ್ಠಿಯಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ರಾಣಿಗೋವಿಂದರಾಜು "ವೂಡೆ ಪಿ.ಕೃಷ್ಣ ಸಾಧನೆಯ ಮೈಲಿಗಲ್ಲು" ಕುರಿತು ಉಪನ್ಯಾಸ ನೀಡಿದರು.

ಸನ್ಮಾನಕ್ಕೆ ಉತ್ತರಿಸಿದ ಡಬ್ಲ್ಯು.ಪಿ.ಕೃಷ್ಣ ಅವರು ಚಿಕ್ಕಂದಿನಲ್ಲೇ ಕೆ.ಎಂ.ನಂಜಪ್ಪ, ಡಿ.ಎಂ.ನಂಜುಂಡಪ್ಪ, ಎಚ್.ಎಸ್.ದೊರೆಸ್ವಾಮಿ, ಐ.ಎನ್.ಎ.ರಾಮರಾವ್ ಮೊದಲಾದವರ ಸಂಪರ್ಕ ಬಂದುದು ತಮ್ಮ ಭಾಗ್ಯ, ಸೇವೆಗಾಗಿ ಬಾಳು ಎನ್ನುವ ಸೇವಾದಳದ ಧ್ಯೇಯವೇ ನನಗೆ ಸ್ಫೂರ್ತಿ ಎಂದರು.

ಸರೋಜಮ್ಮ ಕೆ.ಎಂ.ನಂಜಪ್ಪ, ದ್ವಾರನಕುಂಟೆ ಪಾತಣ್ಣ, ಬಿ.ಪಿ.ಚಂದ್ರಶೇಖರ್ ಅವರೂ ಮಾತನಾಡಿ ಕೃಷ್ಣ ಅವರ ಬಹುಮುಖ ಸಾಧನೆಗಳನ್ನು ಶ್ಲಾಘಿಸಿದರು.

ಡಿ.ಕೆ.ನಾಗರಾಜ್ ನಿರೂಪಿಸಿದ ಈ ಕಾರ್ಯಕ್ರಮ ಜಿ.ಕೆ.ಎಲ್.ರಾಜನ್‌ರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಎಂ.ಆರ್.ಅನಂತಮೂರ್ತಿ ಅವರು ರಾಣಿ ಗೋವಿಂದರಾಜ್ ಅವರ ಎರಡು ಕವನಗಳಿಗೆ ರಾಗ ಸಂಯೋಜಿಸಿ ಹಾಡಿದರು.

ಪ್ರಜಾವಾಣಿ ಶನಿವಾರ 25ನೇ ಜುಲೈ 2009



ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನ ಮೊದಲನೇ ವರ್ಷದ ಪದವಿ ತರಗತಿಗಳ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕೇಂದ್ರ ಮೀಸಲು ಪೊಲೀಸ್ ಪಡೆ (ಸಿ.ಆರ್.ಪಿ.ಎಫ್) ಉಪ ಪೊಲೀಸ್ ಮಹಾ ನಿರ್ದೇಶಕ ಕೆ.ಅರ್ಕೇಶ್ ಗುರುವಾರ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೆ.ಪಿ. ಕೃಷ್ಣ ಮತ್ತಿತರರು ಇದ್ದರು.

ಕನ್ನಡಪ್ರಭ, ಶನಿವಾರ, 25 ಜುಲೈ 2009

## ಉದ್ಘಾಟನೆ



ಶೇಷಾದ್ರಿಪುರ ಕಾಲೇಜು ಹಮ್ಮಿಕೊಂಡ ಪ್ರತಿಭಾ ವಿದ್ಯಾರ್ಥಿ ವೇತನ ಪುರಸ್ಕಾರ ಸಮಾರಂಭದಲ್ಲಿ ಡಾ।ಪಿ.ವಿ.ನಾರಾಯಣ, ಎನ್.ಆರ್.ಪಂಡಿತಾರಾಧ್ಯ , ವೂಡೇ ಪಿ.ಕೃಷ್ಣ, ಡಾ।ನರಹಳ್ಳಿ ಬಾಲಸುಬ್ರಹ್ಮಣ್ಯ ಇದ್ದರು.

ಪುಟ 3

ಸಂಜೆವಾಣಿ

ಶನಿವಾರ 25 ಜುಲೈ 2009



ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ಪ್ರಥಮ ವರ್ಷದ ಪದವಿ ವಿದ್ಯಾರ್ಥಿಗಳ ಸ್ವಾಗತ ಹಾಗೂ ಪ್ರತಿಭಾ ವಿದ್ಯಾರ್ಥಿ ವೇತನ ವಿತರಣಾ ಸಮಾರಂಭವನ್ನು ಖ್ಯಾತ ಲೇಖಕ ಹಾಗೂ ಚಿಂತಕ ಡಾ. ಪಿ.ವಿ. ನಾರಾಯಣ ಅವರು ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಪ್ರಾಚಾರ್ಯ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಇದ್ದಾರೆ.

ಸಂಜೆವಾಣಿ
ಶುಕ್ರವಾರ 24 ಜುಲೈ 2009



ನಗರದಲ್ಲಿ ಆಯೋಜಿಸಿದ್ದ ಹಿರಿಯ ಸಮಾಜ ಸೇವಕ ವೂಡೆ ಪಿ. ಕೃಷ್ಣ ಅವರ ಅಭಿನಂದನಾ ಸಮಾರಂಭದಲ್ಲಿ ಹಿರಿಯ ಕವಯತ್ರಿ ರಾಣಿ ಪಿ. ಗೋವಿಂದರಾಜು ಅವರು 'ವೂಡೆ ಪಿ. ಕೃಷ್ಣ ಸಾಧನೆಯ ಮೈಲಿಗಲ್ಲು' ಎಂಬ ವಿಷಯದ ಕುರಿತು ಉಪನ್ಯಾಸ ನೀಡಿದರು. ರುದ್ರಾಣಿ ಜಿ.ಎಸ್. ಶಿವರುದ್ರಪ್ಪ, ಸರೋಜಮ್ಮ, ಕೆ.ಎಂ. ನಂಜಪ್ಪ, ದ್ವಾರನಕುಂಟೆ ಪಾತಣ್ಣ ಅವರು ಇದ್ದಾರೆ

# ರೆಡ್‌ಕ್ರಾಸ್ ಸಂಸ್ಥೆಗೆ ವೂಡೆ ಕೃಷ್ಣ ಸೇವೆ

ಬೆಂಗಳೂರು, ಜು. ೨೪- ಹಿರಿಯ ಸಮಾಜ ಸೇವಕ ಹಾಗೂ ಉಪನ್ಯಾಸಕ ವೂಡೆ ಪಿ. ಕೃಷ್ಣ ಅವರು ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪವಾಗಿದ್ದಾರೆ ಎಂದು ಖ್ಯಾತ ಕವಯತ್ರಿ ಹಾಗೂ ಸಮಾಜ ಸೇವಕಿ ರಾಣಿ ಪಿ. ಗೋವಿಂದರಾಜು ಅವರು ಅಭಿಪ್ರಾಯಪಟ್ಟಿದ್ದಾರೆ.

ಕಬ್ಬನ್‌ಪಾರ್ಕ್‌ನಲ್ಲಿರುವ ಕರ್ನಾಟಕ ಸರ್ಕಾರದ ಸಚಿವಾಲಯ ಕ್ಲಬ್‌ನಲ್ಲಿ ಆಯೋಜಿಸಿದ್ದ ವೂಡೆ ಪಿ. ಕೃಷ್ಣ ಸಾಧನೆಯ ಮೈಲಿಗಲ್ಲು ಎಂಬ ವಿಷಯದ ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ರೆಡ್‌ಕ್ರಾಸ್ ಸಂಸ್ಥೆ, ಗಾಂಧಿ ಪ್ರತಿಷ್ಠಾನ, ಸೇವಾದಳ, ಬಸವ ಸಮಿತಿ, ಬ್ರಹ್ಮ ಸಮಾಜ ಮುಂತಾದ ಸಂಘ, ಸಂಸ್ಥೆಗಳಲ್ಲಿ ಪ್ರಾಮಾಣಿಕ ಸೇವೆ ಸಲ್ಲಿಸುತ್ತಿರುವ ವೂಡೆ ಪಿ. ಕೃಷ್ಣ ಅವರು ಸ್ವತಃ ರಕ್ತದಾನಿಯಾಗಿದ್ದು, ರಕ್ತದಾನದ ಮಹತ್ವವನ್ನು ಪರಿಚಯಿಸುವಲ್ಲಿ ಹಿರಿದಾದ ಪಾತ್ರ ವಹಿಸುತ್ತ ಬಂದಿದ್ದಾರೆ ಎಂದವರು ನುಡಿದರು.

ಜಗಜ್ಯೋತಿ ಬಸವೇಶ್ವರ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಗಾಂಧೀಜಿ, ಟಿ. ಸಿದ್ದಲಿಂಗಯ್ಯನವರಂಥ ಮಹಾನುಭಾವರಿಂದ ಸ್ಫೂರ್ತಿ ಪಡೆದ ಕೃಷ್ಣ ಅವರು ಬದುಕಿನಲ್ಲಿ ಅವರ ತತ್ವಾದರ್ಶಗಳನ್ನು ಚಾಚೂ ತಪ್ಪದೆ ಅಳವಡಿಸಿಕೊಂಡಿದ್ದಾರೆಂದು ರಾಣಿ ಅವರು ಹೇಳಿದರು.

ನಿಸ್ವಾರ್ಥ ಮಾನವೀಯ ಸೇವೆಯ ಮೂಲಕ ಆದರ್ಶತೆಯ ಹಿರಿಮೆ ಹೊಂದಿದ ವೂಡೆ ಪಿ. ಕೃಷ್ಣ ಅವರಿಗೆ ಕರ್ನಾಟಕ ರಾಜ್ಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ ಸೇರಿದಂತೆ ಅನೇಕ ಪುರಸ್ಕಾರಗಳು ಲಭಿಸಿರುವುದು ಹೆಮ್ಮೆಯ ಸಂಗತಿ ಎಂದ ಅವರು, ಅವರ ಬದುಕು ಇಂದಿನ ಯುವಕರಿಗೆ ಮಾದರಿಯಾಗಿದೆ ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ವೂಡೆ ಪಿ. ಕೃಷ್ಣ ಅವರನ್ನು ಅಭಿನಂದಿಸಿ ಗೌರವಿಸಲಾಯಿತು.

ಸಂಧ್ಯಾದೀಪ ಸಂಸ್ಥೆಯ ಅಧ್ಯಕ್ಷೆ ರುದ್ರಾಣಿ ಜಿ.ಎಸ್. ಶಿವರುದ್ರಪ್ಪ, ಸರೋಜಮ್ಮ, ಕೆ.ಎಂ. ನಂಜಪ್ಪ, ದ್ವಾರನಕುಂಟೆ ಪಾತಣ್ಣ, ಬಿ.ಪಿ. ಚಂದ್ರಶೇಖರ್ ಮುಂತಾದವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ವಾರ್ತಾಭಾರತಿ | ಗುರುವಾರ, ಜುಲೈ 23, 2009

# 'ವೂಡೆ.ಪಿ.ಕೃಷ್ಣ ಕನ್ನಡ ನಾಡಿನ ಉನ್ನತ ಸಂಸ್ಕೃತಿಯ ಪ್ರತೀಕ'

ಬೆಂಗಳೂರು, ಜು.22: ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಶ್ರೀಸಾಮಾನ್ಯರ ಸಮಸ್ಯೆಗಳ ಕುರಿತು, ಸರಕಾರ ಹಾಗೂ ಸಂಘಸಂಸ್ಥೆಗಳ ಗಮನ ಸೆಳೆಯುತ್ತಿದ್ದ ವೂಡೆ.ಪಿ.ಕೃಷ್ಣ, ಕನ್ನಡ ನಾಡಿನ ಉನ್ನತ ಸಂಸ್ಕೃತಿಯ ಪ್ರತೀಕವಾದ, ಸುಸಂಸ್ಕೃತ ಮನಸ್ಸಿನ ವಿಕಸಿತ ರೂಪವೆನಿಸಿಕೊಂಡಿದ್ದಾರೆ ಎಂದು ಕವಯತ್ರಿ ರಾಣಿ ಗೋವಿಂದರಾಜು ಅಭಿಪ್ರಾಯಪಟ್ಟಿದ್ದಾರೆ.

ಇತ್ತೀಚೆಗೆ ಕರ್ನಾಟಕ ಸರಕಾರ ಸಚಿವಾಲಯ ಕ್ಲಬ್‌ನ ಅಧ್ಯಯನ ಗೋಷ್ಠಿಯಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಅವರು, 'ವೂಡೆ ಪಿ.ಕೃಷ್ಣ ಸಾಧನೆಯ ಮೈಲಿಗಲ್ಲು' ಕುರಿತು ಉಪನ್ಯಾಸ ನೀಡಿದರು.

ಕಿರಿಯ ವಯಸ್ಸಿನಲ್ಲೆ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದ ಕೃಷ್ಣ, ರೆಡ್‌ಕ್ರಾಸ್, ಗಾಂಧಿ ಶಾಂತಿ ಪ್ರತಿಷ್ಠಾನ, ಸೇವಾದಳ, ಬಸವ ಸಮಿತಿ, ಬ್ರಹ್ಮಸಮಾಜ ಮೊದಲಾದ ಸಂಘ ಸಂಸ್ಥೆಗಳಲ್ಲಿ ಇಂದಿಗೂ ಕಾರ್ಯ ಪ್ರವೃತ್ತರಾಗಿದ್ದಾರೆ. ಬಿ.ಎಂ.ಎಸ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ, ಈಗ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಗೌರವ ಕಾರ್ಯದರ್ಶಿಯಾಗಿ ಶಿಕ್ಷಣ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಕರ್ನಾಟಕ ರಾಜ್ಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ ಸೇರಿದಂತೆ ನೂರಾರು ಪ್ರಶಸ್ತಿಗಳನ್ನು ಪಡೆದು, ತನ್ನ ನಿಸ್ವಾರ್ಥ ಮಾನವೀಯ ಸೇವೆಯಿಂದ ಎಲ್ಲರಿಗೂ ವಿಶೇಷವಾಗಿ ಯುವಕರಿಗೆ ಮಾದರಿಯಾಗಿರುವ ಕೃಷ್ಣ ಅವರ ಯಶಸ್ಸಿನ ಹಿಂದೆ, ಕುಟುಂಬ ವರ್ಗದವರ ಪಾತ್ರ ಮಹತ್ತರವಾದದ್ದು ಎಂದು ರಾಣಿ ಗೋವಿಂದರಾಜು ತಿಳಿಸಿದ್ದಾರೆ. ಕಾರ್ಯಕ್ರಮದಲ್ಲಿ ವೂಡೆ ಪಿ.ಕೃಷ್ಣರನ್ನು ಸಂಧ್ಯಾದೀಪ ಸಂಸ್ಥೆ ಅಧ್ಯಕ್ಷೆ ರುದ್ರಾಣಿ, ಜಿ.ಎಸ್.ಶಿವರುದ್ರಪ್ಪ ಸನ್ಮಾನಿಸಿದರು.

ಸಂಯುಕ್ತ ಕರ್ನಾಟಕ । ಬೆಂಗಳೂರು । 22-7-2009

# ಸಣ್ಣ ವಯಸ್ಸಿನಲ್ಲೇ ಹಿರಿಯ ಸಾಧನೆ



ಬೆಂಗಳೂರಿನ ಕರ್ನಾಟಕ ಸರ್ಕಾರದ ಸಚಿವಾಲಯ ಕ್ಲಬ್‌ನಲ್ಲಿ ಹಮ್ಮಿಕೊಂಡಿದ್ದ ಅಧ್ಯಯನ ಗೋಷ್ಠಿಯಲ್ಲಿ ವೂಡೇ ಪಿ. ಕೃಷ್ಣ, ರುದ್ರಾಣಿ ಶಿವರುದ್ರಪ್ಪ, ರಾಣಿ ಗೋವಿಂದರಾಜು, ಸರೋಜಮ್ಮ, ಕೆ.ಎಂ. ನಂಜಪ್ಪ ಮತ್ತಿತರರು ಉಪಸ್ಥಿತರಿದ್ದರು.

ಬೆಂಗಳೂರು, ಜು. 21 : ಚಿಕ್ಕವಯಸ್ಸಿನಲ್ಲೆ ಸಮಾಜ ಸೇವೆ ಮಾಡುವ ಮೂಲಕ ರೆಡ್‌ಕ್ರಾಸ್ ಸಂಸ್ಥೆಯ ವೂಡೇ ಪಿ. ಕೃಷ್ಣ ಹಿರಿದಾದ ಸಾಧನೆ ಮಾಡಿದ್ದಾರೆ ಎಂದು ಕವಯತ್ರಿ ರಾಣಿ ಗೋವಿಂದರಾಜು ಬಣ್ಣಿಸಿದ್ದಾರೆ.

ಕರ್ನಾಟಕ ಸರ್ಕಾರದ ಸಚಿವಾಲಯ ಕ್ಲಬ್‌ನ ಅಧ್ಯಯನಗೋಷ್ಠಿಯಲ್ಲಿ ಭಾಗವಹಿಸಿ 'ವೂಡೇ ಪಿ. ಕೃಷ್ಣ ಸಾಧನೆಯ ಮೈಲಿಗಲ್ಲು' ಕುರಿತು ಮಾತನಾಡಿದ ಅವರು, ವೂಡೇ ಪಿ. ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆ, ಗಾಂಧಿಶಾಂತಿ ಪ್ರತಿಷ್ಠಾನ, ಸೇವಾದಳ, ಬಸವ ಸಮಿತಿ, ಬ್ರಹ್ಮ ಸಮಾಜ ಮತ್ತಿತರ ಸಂಸ್ಥೆಗಳಲ್ಲಿ ತೊಡಗಿಸಿಕೊಂಡು ಕಾಯಾ, ವಾಚಾ, ಮನಸಾ ದುಡಿಯುತ್ತಿದ್ದಾರೆ. ಸ್ವತಃ ರಕ್ತದಾನಿಯಾಗಿ ರಕ್ತದಾನದ ಮಹತ್ವವನ್ನು ಪ್ರಚುರಪಡಿಸುತ್ತಾ ಬಂದಿದ್ದಾರೆ ಎಂದು ಹೊಗಳಿದರು.

ಜಗಜ್ಯೋತಿ ಬಸವೇಶ್ವರ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗಾಂಧೀಜಿ, ಟಿ. ಸಿದ್ಧಲಿಂಗಯ್ಯ ಮೊದಲಾದವರಿಂದ ಸ್ಫೂರ್ತಿ ಪಡೆದು ಅವರ ಆದರ್ಶಗಳನ್ನು ಅಳವಡಿಸಿಕೊಂಡಿದ್ದಾರೆ. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿಯಾಗಿ 20 ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಸಮರ್ಪಕ ಶಿಕ್ಷಣ ಸಿಗುವಂತೆ ನೋಡಿಕೊಂಡಿದ್ದಾರೆ.

ಕರ್ನಾಟಕ ರಾಜ್ಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ ಸೇರಿದಂತೆ ನೂರಾರು ಪ್ರಶಸ್ತಿಗಳನ್ನು ಪಡೆದಿದ್ದರೂ ಸಮಾಜಕ್ಕೆ ಇನ್ನಷ್ಟು ದುಡಿಯಬೇಕೆಂಬ ತುಡಿತ ಅವರಲ್ಲಿದೆ. ಇಂತಹ ವ್ಯಕ್ತಿಯ ನಡುವೆ ನಾವಿರುವುದು ನಮ್ಮ ಪುಣ್ಯ ಎಂದರು.

ಇದೇ ಸಂದರ್ಭದಲ್ಲಿ ವೂಡೇ ಪಿ. ಕೃಷ್ಣ ಅವರನ್ನು ಸಂಧ್ಯಾದೀಪದ ಅಧ್ಯಕ್ಷೆ ರುದ್ರಾಣಿ ಜಿ.ಎಸ್. ಶಿವರುದ್ರಪ್ಪ ಸನ್ಮಾನಿಸಿದರು. ಸರೋಜಮ್ಮ ಕೆ.ಎಂ. ನಂಜಪ್ಪ, ದ್ವಾರನಕುಂಟೆ ಪಾತಣ್ಣ, ಬಿ.ಪಿ. ಚಂದ್ರಶೇಖರ್ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ ಬುಧವಾರ 22 ಜುಲೈ 2009



## ಅಧ್ಯಯನ ಗೋಷ್ಠಿ

ಸೆಕ್ರೆಟರಿಯನ್ ಕಬ್ ಹಮ್ಮಿಕೊಂಡ ಅಧ್ಯಯನ ಗೋಷ್ಠಿಯಲ್ಲಿ ರಾಣಿ ಗೋವಿಂದರಾಜು, ಪ್ರೊ. ಪಿ.ಕೃಷ್ಣ, ರುದ್ರಾಣಿ ದೇವಿ, ಶಿವಯ್ಯದಪ್ಪ, ಸರೋಜಾ ಕೆ.ಪಿ.ನಂದಪ್ಪ, ಬಿ.ಪಿ.ಚಂದ್ರಶೇಖರ್ ಭಾಗವಹಿಸಿದ್ದರು.

ಉದಯವಾಣಿ

**ಶುಕ್ರವಾರ 17 ಜುಲೈ 2009**

**ಕರ್ನಾಟಕ ಸರಕಾರದ ಸಚಿವಾಲಯ ಕ್ಲಬ್-ಅಧ್ಯಯನ ಗೋಷ್ಠಿ:** ಕಬ್ಬನ್‌ಪಾರ್ಕ್. ಸಾಪ್ತಾಹಿಕ ಉಪನ್ಯಾಸ ಮಾಲಿಕೆ ಅಂಗವಾಗಿ ವಿ.ರಾಣಿ ಗೋವಿಂದರಾಜು ಅವರಿಂದ 'ವೂಡೆ.ಪಿ. ಕೃಷ್ಣ ಅವರ ಸಾಧನೆಯ ಮೈಲಿಗಲ್ಲು' ಕುರಿತು ಉಪನ್ಯಾಸ. ಸಂಜೆ 6.

ಪ್ರಜಾವಾಣಿ

**ಶುಕ್ರವಾರ 17ನೇ ಜುಲೈ 2009**

**ಕರ್ನಾಟಕ ಸರ್ಕಾರ ಸಚಿವಾಲಯ ಕ್ಲಬ್:** ಕಬ್ಬನ್ ಉದ್ಯಾನ ಆವರಣ. 'ವೂಡೇ ಪಿ. ಕೃಷ್ಣ ಸಾಧನೆಯ ಮೈಲುಗಲ್ಲು' ವಿಷಯ ಕುರಿತು ಉಪನ್ಯಾಸ ವಿ. ರಾಣಿ ಗೋವಿಂದರಾಜು. ಸಂಜೆ 6.

ವಿಜಯ ಕರ್ನಾಟಕ

**ಶುಕ್ರವಾರ 17 ಜುಲೈ 2009**

**ಇಂದಿನ [illegible]**

ಕಬ್ಬನ್ ಪಾರ್ಕ್‌ನ ರಾಜ್ಯ ಸರಕಾರದ ಸಚಿವಾಲಯ ಕ್ಲಬ್‌ನ ಅಧ್ಯಯನ ಗೋಷ್ಠಿಯಲ್ಲಿ ಸಂಜೆ 6ಕ್ಕೆ ವಿ. ರಾಣಿ ಗೋವಿಂದರಾಜು ಅವರಿಂದ 'ವೂಡೆ ಪಿ. ಕೃಷ್ಣ ಅವರ ಸಾಧನೆಯ ಮೈಲಿಗಲ್ಲು' ಉಪನ್ಯಾಸ ಏರ್ಪಡಿಸಲಾಗಿದೆ.

ಕಾಡಿನ ಮಿತ್ರ

20-07-2009



ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಅವರು ರಾಜ್ಯಪಾಲ ಎಚ್.ಆರ್. ಭಾರದ್ವಾಜ್ ಅವರನ್ನು ಭೇಟಿ ಮಾಡಿ ಅಭಿನಂದಿಸಿದರು. ಸಂಸ್ಥೆಯ ಖಜಾಂಚಿ ರಾಜು ಚಂದ್ರಶೇಖರ್ ಪಾಲ್ಗೊಂಡಿದ್ದರು.

ಬೆಂಗಳೂರು ವಿಜಯ | ಗುರುವಾರ, 9 ಜುಲೈ 2009



ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ ಅವರು ರಾಜ್ಯಪಾಲ ಎಚ್.ಆರ್. ಭಾರದ್ವಾಜ್ ಅವರನ್ನು ಭೇಟಿ ಮಾಡಿ ಅಭಿನಂದಿಸಿದರು. ಸಂಸ್ಥೆಯ ಖಜಾಂಚಿ ರಾಜು ಚಂದ್ರಶೇಖರ್ ಪಾಲ್ಗೊಂಡಿದ್ದರು.

ವಿಜಯ ಕರ್ನಾಟಕ | ಬುಧವಾರ, 8 ಜುಲೈ 2009 | ಬೆಂಗಳೂರು





# ಭಾರತೀಯ ರೆಡ್ ಕ್ರಾಸ್ ಸಂಸ್ಥೆ

ತುಮಕೂರು ಶಾಖೆ

Indian Red Cross Society, Tumkur Branch

# ರೆಡ್ ಕ್ರಾಸ್ ಭವನ ಉದ್ಘಾಟನಾ ಸಮಾರಂಭ

**ದಿನಾಂಕ : ಬುಧವಾರ, 08-07-2009, ಬೆಳಿಗ್ಗೆ 11 ಗಂಟೆಗೆ**

**ಸ್ಥಳ : ರೆಡ್ ಕ್ರಾಸ್ ಭವನ, ಅಶೋಕ ರಸ್ತೆ, ತುಮಕೂರು-1**



ದಿವ್ಯಸಾನಿಧ್ಯ :

**ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**

ಶ್ರೀ ಸಿದ್ಧಗಂಗಾ ಮಠ, ತುಮಕೂರು



ಉದ್ಘಾಟನೆ :

**ಶ್ರೀ ಹಂಸರಾಜ್ ಭಾರದ್ವಾಜ್**

ಘನತೆವೆತ್ತ ರಾಜ್ಯಪಾಲರು, ಕರ್ನಾಟಕ ರಾಜ್ಯ

ಅಧ್ಯಕ್ಷತೆ :

**ಸನ್ಮಾನ್ಯ ಶ್ರೀ ಬಿ. ಶ್ರೀರಾಮುಲು**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು, ಕರ್ನಾಟಕ ಸರ್ಕಾರ ಹಾಗೂ
ಛೇರ್‌ಮನ್, ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಕರ್ನಾಟಕ ರಾಜ್ಯ ಶಾಖೆ

ಮುಖ್ಯ ಅತಿಥಿಗಳು :

**ಸನ್ಮಾನ್ಯ ಶ್ರೀ ಎಸ್. ಸುರೇಶ್‌ಕುಮಾರ್**

ಕಾನೂನು ಮತ್ತು ನಗರಾಭಿವೃದ್ಧಿ ಸಚಿವರು, ಕರ್ನಾಟಕ ಸರ್ಕಾರ
ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು

**ಸನ್ಮಾನ್ಯ ಶ್ರೀ ವೆಂಕಟರಮಣಪ್ಪ**

ರೇಷ್ಮೆ ಮತ್ತು ಸಣ್ಣ ಕೈಗಾರಿಕೆ ಸಚಿವರು, ಕರ್ನಾಟಕ ಸರ್ಕಾರ

**ಸನ್ಮಾನ್ಯ ಶ್ರೀ ಜಿ.ಎಸ್. ಬಸವರಾಜು**

ಲೋಕಸಭಾ ಸದಸ್ಯರು, ತುಮಕೂರು

**ಸನ್ಮಾನ್ಯ ಶ್ರೀ ಎಸ್. ಶಿವಣ್ಣ**

ವಿಧಾನಸಭಾ ಸದಸ್ಯರು, ತುಮಕೂರು ನಗರ

**ಸನ್ಮಾನ್ಯ ಶ್ರೀ ಬಿ. ಸುರೇಶ್ ಗೌಡ**

ವಿಧಾನಸಭಾ ಸದಸ್ಯರು, ತುಮಕೂರು ಗ್ರಾಮಾಂತರ

**ಸನ್ಮಾನ್ಯ ಶ್ರೀ ಪ್ರೊಡೇ ಪಿ. ಕೃಷ್ಣ**

ವೈಸ್ ಛೇರ್‌ಮನ್, ಭಾರತೀಯ ರೆಡ್ ಕ್ರಾಸ್ ಸಂಸ್ಥೆ, ಕರ್ನಾಟಕ ರಾಜ್ಯ ಶಾಖೆ

**ಸನ್ಮಾನ್ಯ ಶ್ರೀ ದಿಲೀಪ್ ಮಾವಿನ್‌ಕುರ್ವೆ**

ವ್ಯವಸ್ಥಾಪಕ ನಿರ್ದೇಶಕರು, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು

## *ಸರ್ವರಿಗೂ ಸುಸ್ವಾಗತ*

**ಡಾ. ಸಿ. ಸೋಮಶೇಖರ**, ಭಾ.ಆ.ಸೇ.
ಜಿಲ್ಲಾಧಿಕಾರಿಗಳು ಹಾಗೂ ಛೇರ್‌ಮನ್,
ಮತ್ತು ಆಡಳಿತ ಮಂಡಳಿ ಸದಸ್ಯರು,
ಭಾರತೀಯ ರೆಡ್‌ಕ್ರಾಸ್ ಸಂಸ್ಥೆ
ತುಮಕೂರು ಶಾಖೆ.



ಬೆಂಗಳೂರು ವಿಜಯ | ಬುಧವಾರ, 8 ಜುಲೈ 2009



ವಿಶ್ವ ಸ್ವಯಂ ರಕ್ತದಾನಿಗಳ ದಿನಾಚರಣೆ ಅಂಗವಾಗಿ ರಾಜಭವನದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಹೆಚ್ಚು ರಕ್ತ ಸಂಗ್ರಹಿಸಿದ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರಿಂದ ಪ್ರಥಮ ಪ್ರಶಸ್ತಿ ಪಡೆಯಿತು. ಒಕ್ಕೂಟದ ಸಲಹೆಗಾರ ಜಯರಾಂ ಹಾಗೂ ಕಾರ್ಯಕಾರಿ ಮಂಡಳಿ ಸದಸ್ಯ ಅರುಣ್ ಸ್ವೀಕರಿಸಿದರು. ವೂಡೇ ಪಿ. ಕೃಷ್ಣ ಹಾಗೂ ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಹಾಜರಿದ್ದರು.

ಈ ಸಂಜೆ

ಮಂಗಳವಾರ, 7 ಜುಲೈ 2009



ರಾಜ್ಯಪಾಲ ಹಾಗೂ ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಅಧ್ಯಕ್ಷ ಎಚ್.ಆರ್. ಭಾರದ್ವಾಜ್ ಅವರನ್ನು ಉಪಾಧ್ಯಕ್ಷ ವೂಡೆ. ಪಿ.ಕೃಷ್ಣ ಮತ್ತು ಗೌರವ ಖಜಾಂಚಿ ರಾಜುಚಂದ್ರಶೇಖರ್ ಭೇಟಿ ಮಾಡಿ ಅಭಿನಂದಿಸಿದರು.

ನಾಡಿನ ಮಿತ್ರ | 06-07-2009



ವಿಶ್ವ ರಕ್ತದಾನಿಗಳ ದಿನದ ಅಂಗವಾಗಿ ರೆಡ್‌ಕ್ರಾಸ್ ಸಂಸ್ಥೆ ರಾಜಭವನದಲ್ಲಿ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರವನ್ನು ರಾಜ್ಯಪಾಲ ರಾಮೇಶ್ವರ ಠಾಕೂರ್ ಉದ್ಘಾಟಿಸಿದರು. ರೆಡ್‌ಕ್ರಾಸ್‌ನ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಡಾ.ಎಸ್.ಎಂ. ಸುರೇಶ್‌ಗೌಡ, ತುಮಕೂರು ಜಿಲ್ಲಾಧಿಕಾರಿ ಡಾ. ಸಿ.ಸೋಮಶೇಖರ್ ಹಾಜರಿದ್ದರು.

# ಜೀವನ ವಿಕಾಸಕ್ಕೆ ಆತ್ಮ ವಿಶ್ವಾಸ ಮುಖ್ಯ

ಬೆಂಗಳೂರು: ಮನುಷ್ಯನ ಜೀವನ ಶ್ರೇಷ್ಠವಾಗಲು ಮತ್ತು ಮಹತ್ವದ ಸಾಧನೆಗೈಯಲು ವಿದ್ಯಾರ್ಥಿಗಳಲ್ಲಿ ಆತ್ಮ ವಿಶ್ವಾಸವಿರಬೇಕು ಎಂದು ಸಾಹಿತಿ ಪ್ರೊ. ಹಂಚಿನಮನೆ ವೀರಭದ್ರಪ್ಪ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಪದವಿ ಪೂರ್ವ ಕಾಲೇಜು ಏರ್ಪಡಿಸಿದ್ದ ಎಸ್ಸೆಸ್ಸೆಲ್ಸಿಯಲ್ಲಿ ಶೇ. 90 ಅಂಕಪಡೆದು, ಕಾಲೇಜಿನ ಪ್ರಥಮ ಪಿಯುಸಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಅಭಿನಂಧನಾ ಸಮಾರಂಭದಲ್ಲಿ ಅವರು ಮಾತನಾಡಿದರು.

ವಿದ್ಯೆಯ ಜತೆಗೆ ವಿನಯವಿದ್ದರೆ ಬುದ್ಧಿಯೂ ಹೆಚ್ಚುತ್ತದೆ. ದೇಶ, ಭಾಷೆ, ಜಗತ್ತಿಗೆ ಒಂದಲ್ಲ ಒಂದು ವಿಧದಲ್ಲಿ ಹಿರಿಯರಿಂದ, ಸಂಘಸಂಸ್ಥೆಗಳಿಂದ ಸಮಾಜದಿಂದ ಪಡೆದ ಋಣವನ್ನು ಮರಳಿಸದ ವ್ಯಕ್ತಿ ಪರಿಪೂರ್ಣವಾಗಲಾರ ಎಂದರು.




ಶೇಷಾದ್ರಿಪುರ ಪದವಿ ಪೂರ್ವ ಕಾಲೇಜು ಏರ್ಪಡಿಸಿದ್ದ ಸಮಾರಂಭದಲ್ಲಿ ಸಿಇಟಿಯಲ್ಲಿ 19ನೇ ರ್‍ಯಾಂಕ್ ಪಡೆದ ಬಿ.ಎಸ್. ವಿನಯ್ ಅವರನ್ನು ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಭಿನಂದಿಸಿತು. ಪ್ರಿನಿಪಾಲ್ ಪ್ರೊ.ಎಂ.ಆರ್. ಶ್ರೀನಿವಾಸ್, ವೂಡೇ ಪಿ. ಕೃಷ್ಣ, ಎಂಜಿಯರ್ ಡಾ. ಮುರಳಿಕೃಷ್ಣರೆಡ್ಡಿ, ಸಾಹಿತಿ ಹಂಚಿನಮನೆ ವೀರಭದ್ರಪ್ಪ ಎ.ಎಆರ್. ಶ್ರೀನಿವಾಸಯ್ಯ, ಬಿ.ಎಂ. ಪಾರ್ಥಸಾರಥಿ ಪಾಲ್ಗೊಂಡಿದ್ದರು.

ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ ಇಂಡಿಯಾ ಸಂಸ್ಥೆಯ ಅಧ್ಯಕ್ಷ ಡಾ. ಎಲ್.ವಿ. ಮುರಳಿಕೃಷ್ಣ ರೆಡ್ಡಿ ಮಾತನಾಡಿ, ಇಂದು ಪರಿಸರ, ವ್ಯವಸಾಯ ಮತ್ತು ತಾಂತ್ರಿಕ ಜ್ಞಾನ ಜಗತ್ತಿನಲ್ಲಿ ಹೆಚ್ಚಬೇಕು. ಜತೆಗೆ ಅಭಿವೃದ್ಧಿ ಹೊಂದಬೇಕು. ಈ ಹಿನ್ನೆಲೆಯಲ್ಲಿ ನಾವೆಲ್ಲರೂ ಕಾರ್ಯಪ್ರವೃತ್ತರಾಗಬೇಕು. ಭವಿಷ್ಯದ ಭಾರತ ಹಾಗೂ ಜಗತ್ತನ್ನು ಕಟ್ಟುವ ಶಕ್ತಿ ಇಂದಿನ ಯುವಕರಲ್ಲಿ ಬರಬೇಕು ಎಂದು ನುಡಿದರು.

ಅಧ್ಯಕ್ಷತೆ ವಹಿಸಿದ್ದ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಶೇಷಾದ್ರಿಪುರ ಶಿಕ್ಷಣ ದತ್ತಿಯು ಬೆಳೆದುಬಂದ ಬಗೆಯನ್ನು ವಿವರಿಸಿದರು.

ಜಂಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಸಹ ಕಾರ್ಯದರ್ಶಿ ಸರೋಜಾ ನಂಜಪ್ಪ, ಧರ್ಮದರ್ಶಿ ಲೋಕನಾಥ್, ಡಬ್ಲ್ಯು.ಜಿ. ರಾಮಕೃಷ್ಣ ಮುಂತಾದವರು ಭಾಗವಹಿಸಿದ್ದರು. ಕಾಲೇಜು ಆಡಳಿತ ಮಂಡಳಿಯ ಅಧ್ಯಕ್ಷ ಬಿ.ಎಂ. ಪಾರ್ಥಸಾರಥಿ ಸ್ವಾಗತಿಸಿ, ಪ್ರಿನ್ಸಿಪಾಲ್ ಪ್ರೊ. ಎಂ.ಆರ್. ಶ್ರೀನಿವಾಸ್ ಅತಿಥಿ ಪರಿಚಯ ಮಾಡಿದರು. ಗಣಕ ವಿಜ್ಞಾನ ಉಪನ್ಯಾಸಕ ಬಿ.ಜಿ. ಉದಯಕುಮಾರ್ ನಿರೂಪಿಸಿ, ಪ್ರೊ. ಎಂ.ಎನ್. ಸುಭಾಷಿಣಿ ವಂದಿಸಿದರು. ಪ್ರೊ. ಎಸ್. ಸುರೇಶ್ ಪಾಲ್ಗೊಂಡಿದ್ದರು.

ಸಮಾರಂಭದಲ್ಲಿ 75 ಮಂದಿ ವಿದ್ಯಾರ್ಥಿಗಳಿಗೆ ತಲಾ ಐದು ಸಾವಿರ ನಗದು ಮತ್ತು ಪ್ರಮಾಣ ಪತ್ರ ನೀಡಿ ಗೌರವಿಸಲಾಯಿತು. 2009ರ ಸಿಇಟಿಯಲ್ಲಿ 19ನೇ ರ್‍ಯಾಂಕ್ ಪಡೆದ ಬಿ.ಎಸ್. ವಿನಯ್ ಅವರನ್ನು ಸಹ ಸನ್ಮಾನಿಸಲಾಯಿತು.



ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಿದ್ದ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಎಸ್‌ಜೆಆರ್‌ಸಿ. ಕಾಲೇಜಿನ ನಿವೃತ್ತ ಪ್ರಾಂಶುಪಾಲ ಡಾ. ಸಿ.ಯು. ಮಂಜುನಾಥ್ ಉದ್ಘಾಟಿಸಿದರು. ಕಾಲೇಜಿನ ವೂಡೇ ಪಿ.ಕೃಷ್ಣ, ವೀರಭದ್ರಯ್ಯ, ಪ್ರಾಂಶುಪಾಲ ಬೈರೇಗೌಡ ಪಾಲ್ಗೊಂಡಿದ್ದರು.

# ಸತತ ಪ್ರಯತ್ನದಿಂದ ಗುರಿ ಮುಟ್ಟಲು ಸಾಧ್ಯ

ಬೆಂಗಳೂರು, ಜು.1- ಮಾನವನ ಜೀವನದಲ್ಲಿ ಗುರಿಗಳು ಮಹತ್ವದ ಸ್ಥಾನವನ್ನು ಹೊಂದಿರುತ್ತವೆ. ಚೈತನ್ಯಶೀಲ ವ್ಯಕ್ತಿತ್ವದವರು ಸತತ ಪ್ರಯತ್ನದ ಮೂಲಕ ಈ ಗುರಿಯನ್ನು ತಲುಪಲು ಸಾಧ್ಯ ಎಂದು ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜಿನ ನಿವೃತ್ತ ಪ್ರಾಚಾರ್ಯ ಡಾ.ಸಿ.ಯು.ಮಂಜುನಾಥ್ ಅವರು ವಿದ್ಯಾರ್ಥಿಗಳಿಗೆ ಕಿವಿ ಮಾತು ಹೇಳಿದರು.

ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನ ಪ್ರಥಮ ಪಿಯು ವಿದ್ಯಾರ್ಥಿಗಳ ಪುನಶ್ಚೇತನ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಸಮಯ ಮತ್ತು ಸಮುದ್ರದ ಅಲೆಗಳು ಯಾರನ್ನೂ ಕಾಯುವುದಿಲ್ಲ ಎಂಬುದನ್ನು ಸದಾ ನೆನಪಿನಲ್ಲಿಡಬೇಕೆಂದು ಅವರು ತಿಳಿಸಿದರು.

ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷ ವೀರಭದ್ರಯ್ಯನವರು ವಿದ್ಯಾರ್ಥಿಗಳಿಗೆ ಅಬ್ದುಲ್ ಕಲಾಂ ಹಾಗೂ ವಿವೇಕಾನಂದರ ಬದುಕಿನ ನಿದರ್ಶನಗಳನ್ನು ನೀಡುವುದರೊಂದಿಗೆ ಹಿತವಚನ ನೀಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳು ಹಾಗೂ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ವೂಡೆ ಪಿ.ಕೃಷ್ಣ ಅವರು ಶಿಕ್ಷಣ ಕ್ಷೇತ್ರದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಸ್ಥಾನವನ್ನು ಪರಿಚಯಿಸಿ, ವಿದ್ಯಾರ್ಥಿಗಳ ಬದುಕಿನಲ್ಲಿ ಶಿಕ್ಷಣದ ಮಹತ್ವವನ್ನು ತಿಳಿಸಿಕೊಟ್ಟರು.

ಸಂಜೆ ಪದವಿ ಪೂರ್ವ ಕಾಲೇಜಿನ ಪ್ರಾಚಾರ್ಯರಾದ ಪ್ರೊ. ಎನ್. ಬೈರೇಗೌಡ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ | ಬುಧವಾರ, 1 ಜುಲೈ 2009



ಶೇಷಾದ್ರಿಪುರ ಸಂಯುಕ್ತ ಪದವಿಪೂರ್ವ ಕಾಲೇಜಿನ ಪ್ರಥಮ ಪಿಯುಸಿ ವಿದ್ಯಾರ್ಥಿಗಳ ಪುನಶ್ಚೇತನ ಕಾರ್ಯಕ್ರಮದಲ್ಲಿ ಎಸ್ಸೆಸ್ಸೆಲ್ಸಿಯಲ್ಲಿ ಶೇ. 91 ಅಂಕ ಗಳಿಸಿದ ವಿಕಲಚೇತನ ವಿದ್ಯಾರ್ಥಿ ಕೆ. ಸಾರ್ಥಕ್ ಕಾಮತ್ ಅವರನ್ನು ಯುಜಿಸಿ ಪ್ರಾಧ್ಯಾಪಕ ಎಮೆರಿಟಸ್ ಡಾ.ಎಂ.ಪಿ. ಚೌಡಯ್ಯ ಸನ್ಮಾನಿಸಿದರು. ಮಾನವ ಸಂಪನ್ಮೂಲ ತರಬೇತುದಾರ ಜಯಸಿಂಹ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಪ್ರಿನ್ಸಿಪಾಲ್ ಪ್ರೊ. ಸಂತಾನಮ್ ಪಾಲ್ಗೊಂಡಿದ್ದರು.